# ಊರುಕೇರಿ ಮತ್ತು ಮಣೆಗಾರ ಆತ್ಮಕತೆಗಳ ತೌಲನಿಕ ಅಧ್ಯಯನ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ


ನಿಬಂಧಕಾರರು

**ಚಿಕ್ಕಬುದ್ಧಿ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಪ್ರೊ. ಸುಧಾಕರ್**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು







ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮-೦೯

# ಊರುಕೇರಿ ಮತ್ತು ಮಣೆಗಾರ ಆತ್ಮಕತೆಗಳ ತೌಲನಿಕ ಅಧ್ಯಯನ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ



ನಿಬಂಧಕಾರರು

**ಚಿಕ್ಕಬುದ್ಧಿ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು




ಮಾರ್ಗದರ್ಶಕರು

**ಪ್ರೊ. ಸುಧಾಕರ್**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು



**ಕನ್ನಡ ವಿಶ್ವವಿದ್ಯಾಲಯ, ಹಂಪಿ**
೨೦೦೮-೦೯

# ದೃಢೀಕರಣಪತ್ರ

೨೦೦೮–೦೯ನೇ ಸಾಲಿನಲ್ಲಿ ಕ್ರಮ ಸಂಖ್ಯೆ KVTM - 00147ರ ವಿದ್ಯಾರ್ಥಿಯಾದ ಚಿಕ್ಕಬುದ್ದಿ ಎಂ.ಫಿಲ್ ಪರೀಕ್ಷೆಯ ಅಂಗವಾಗಿ **"ಊರುಕೇರಿ ಮತ್ತು ಮಣೆಗಾರ ಆತ್ಮಕತೆಗಳ ತೌಲನಿಕ ಅಧ್ಯಯನ"** ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**(ಪ್ರೊ. ಸುಧಾಕರ)**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು – 570 006

ಮೈಸೂರು
ದಿನಾಂಕ: ೧೪/೦೯/೨೦೦೯

# ಅಭ್ಯರ್ಥಿಯ ಘೋಷಣಾಪತ್ರ

**"ಊರುಕೇರಿ ಮತ್ತು ಮಣೆಗಾರ ಆತ್ಮಕತೆಗಳ ತೌಲನಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTM - 00147ರ ವಿದ್ಯಾರ್ಥಿಯಾದ ನಾನು ೨೦೦೮-೦೯ನೇ ಸಾಲಿನ ಪರೀಕ್ಷೆಗಾಗಿ **ಪ್ರೊ. ಸುಧಾಕರ್, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Chikkabuddi S.J.

ಮೈಸೂರು

ದಿನಾಂಕ : 14/05/2005

**(ಚಿಕ್ಕಬುದ್ಧಿ)**

೨೦೦೮-೦೯ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

# ಪ ರಿ ವಿ ಡಿ



*****

# ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಗತ್ತಿನ ಪ್ರತಿಯೊಂದು ಚರಾಚರ ವಸ್ತು, ಜೀವಿಯೂ ಕೂಡ ತನ್ನದೇ ಆಕಾರ, ಎಲ್ಲೆ, ಭೌಗೋಳಿಕತೆ ಮತ್ತು ಪ್ರಾಕೃತಿಕತೆಯನ್ನು ತನ್ನಲ್ಲಿ ಅಂತರ್ ಗರ್ಭೀಕರಿಸಿಕೊಂಡು ತಾನೂ ಕೂಡ ಅದರಲ್ಲಿ ಒಂದಾಗಿ ಲೀನವಾಗಿರುತ್ತದೆ. ಅಮೀಬಾದಿಂದ ಆನೆಯವರೆಗೆ ಮೂಢ ನಂಬಿಕೆಯಿಂದ ನವನಾಗರೀಕತೆಯ ವರೆಗೆ ದಾಪುಗಾಲಿಟ್ಟಿರುವ ಜಗತ್ತು ಸಾವಿರಾರು ವಾರ್ಷಿಕ ಅವಧಿಯನ್ನು ಕಳೆದುಕೊಂಡು ಸಾಗುತ್ತಾ ಬಂದಿದೆ.

ಜೀವ ವೈವಿಧ್ಯಮಯ ವಿಕಾಸವನ್ನು ಪಡೆದುಕೊಂಡಿರುವಂತಹ ಈ ಜಗತ್ತು ವಿಭಿನ್ನಾತ್ಮಕತೆಯನ್ನು ಹೊಂದಿದ್ದರೂ ಕೂಡ ಏಕತೆಯನ್ನು ಪ್ರತಿನಿಧಿಸುವ ಅಂತರ್ ಸಂಬಂಧವನ್ನು ಹೊಂದಿದೆ. ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಮನೋರಂಜನಾತ್ಮಕ ಗುಣವಿಶೇಷತೆಗಳಿಂದ ಇಡೀ ಪ್ರಪಂಚ ತುಂಬಿಕೊಂಡಿದೆ. ಜಗತ್ತಿನ ಪ್ರತಿಯೊಂದು ಜೀವಿಯೂ ಕೂಡ ಪ್ರಾಕೃತಿಕ ಮಡಿಲಿನಲ್ಲಿ ಸ್ವಾತಂತ್ರ್ಯವನ್ನು ಗಿಟ್ಟಿಸಿಕೊಂಡು ಅನುಭವಿಸುತ್ತಿವೆ.

ಯಾವುದೇ ಜೀವಿಯೂ ಕೂಡ ಇಂತಿಂಥ ಜೀವಿಯ ಶರೀರದಲ್ಲಿ ಜನಿಸಬೇಕೆಂದುಕೊಂಡು ತನ್ನ ತಾಯಿಯ ಉದರದಿಂದಲೇ ಅರ್ಜಿಯನ್ನು ಹಾಕಿಕೊಂಡು ಬಂದಿರುವುದಿಲ್ಲ. ಅಂತೆಯೇ ಯಾವ ಜೀವಿಯೂ ಕೂಡ ನನಗೆ ಕಪ್ಪು – ಬಿಳುಪು ಹಾಗೂ ಇನ್ನಿತರ ಬಣ್ಣಗಳೇ ಬೇಕೆಂದುಕೊಂಡು ಅಹವಾಲನ್ನು ಸಲ್ಲಿಸಿಕೊಂಡೇ ಧರೆಗಿಳಿದಿರುವುದಿಲ್ಲ. ಭೂಮಿಯ ಮೇಲೆ ಬಡವನಾಗಿ, ಶ್ರೀಮಂತನಾಗಿ ಕಪ್ಪಗೆ, ಬೆಳ್ಳಗೆ, ಕುಳ್ಳಗೆ ಎತ್ತರದ ವ್ಯಕ್ತಿಯಾಗಿ ಆಳಾಗಿ ಅರಸನಾಗಿ ಜನಿಸುತ್ತೇನೆಂದು ಎಂದಿಗೂ ಯಾರೂ ಕೂಡ ನಿರೀಕ್ಷಿಸಿರುವುದಿಲ್ಲ. ಹುಟ್ಟುವಾಗ ಕೊಳೆ–ಕೊತ್ತೆಗಳನ್ನು ಹೊತ್ತುಕೊಂಡೆ ಧರೆಗೆ ಆಗಮಿಸಿದರೂ ಕೂಡ, ಪ್ರಕೃತಿ, ಸಮಾಜ ಸಂಸ್ಕೃತಿಯ ನಡುವೆ ಬೆಳೆದುಕೊಂಡು ಸಾಮಾಜಿಕ ಅಂಟುರೋಗಗಳಿಂದ ಜಾತಿ, ಧರ್ಮ, ವರ್ಣ, ವರ್ಗ, ಲಿಂಗ ಮುಂತಾದ ಅನಿಷ್ಟ ಸಂಕೋಲೆಗಳಿಂದ ಬಂಧಿತನಾಗಿ ಜೀವನವಿಡೀ ನರಳುತ್ತಿದ್ದೇವೆ. ಜಗತ್ತಿನ ಪ್ರತಿಯೊಂದು ಸಮಾಜದಲ್ಲಿಯೂ ಸಾಮಾಜಿಕ ಸ್ತರ ವ್ಯವಸ್ಥೆಯನ್ನು ಕಾಣುತ್ತಿದ್ದೇವೆ. ಅರ್ಥಾತ್ ಧರ್ಮದ ನೆಲೆಯಲ್ಲಿ ಶ್ರೇಷ್ಠ ಕನಿಷ್ಠವೆಂದು, ಮೇಲು–ಕೀಳೆಂದು, ಅಂಗ್ಯೆ–ಅಡಿಗ್ಯೆ, ಮಡಿಮೈಲಿಗೆ ಎಂದು ವಿಭಾಗವಾಗಿವೆ.

ವಿಶ್ವಸಾಹಿತ್ಯದಲ್ಲಿ ಭಿನ್ನ-ವಿಭಿನ್ನವಾದಂತಹ ಸಾಹಿತ್ಯಿಕ, ಸಾಂಸ್ಕೃತಿಕ, ಭೇದಗಳು ಕಂಡುಬಂದಿದ್ದು ಅಂತೆಯೇ ಕನ್ನಡ ಸಾಹಿತ್ಯದಲ್ಲಿ ಕಥೆ, ಕಾದಂಬರಿ, ನಾಟಕ, ಪ್ರಬಂಧ, ಕಾವ್ಯ ಆತ್ಮಕತೆ ಇಂತೆಲ್ಲಾ ಪ್ರಕಾರಗಳು ಯುಗಾಂತರದಲ್ಲಿ ಹೊಸ ಬೆಳಕನ್ನು ಸ್ವೀಕರಿಸುತ್ತಾ ನವ ದೇಹದಾರ್ಢ್ಯವನ್ನು ಧರಿಸುತ್ತಾ ಸಾಗಿವೆ. ಹಾಗೆಯೇ ಆತ್ಮಕಥಾ ಪ್ರಕಾರದ ಸಾಹಿತ್ಯವೂ ಕೂಡ ಸಾಹಿತ್ಯದ ಒಂದುಭಾಗವಾಗಿಯೇ ಬೆಳೆಯತೊಡಗಿತು.

ಸಾಹಿತ್ಯದ ಪಾಲಿಗೆ ಆತ್ಮಕತೆಗಳು ಕೇವಲ ಸಾಂಸ್ಕೃತಿಕ ಮನೋರಂಜನೆಯನ್ನು ಮರುಕಳಿಸುವ ಮೂಲೋದ್ದೇಶದಿಂದಲೇ ಕವಿಗಳಿಂದ ರಚಿಸಲ್ಪಟ್ಟಿದ್ದವು. ಆದರೆ ಅವುಗಳ ವ್ಯಾಪ್ತಿ ಬದುಕಿನ ಆನಂದವನ್ನು ವೃದ್ಧಾಪ್ಯದಲ್ಲಿ ಸವಿಯುವ, ಒಂದೇ ಆಲೋಚನೆ ಎಂಬ ನಿಲುವನ್ನು ಇಂದಿನ ವೈಚಾರಿಕ ಯುಗದಲ್ಲಿ ಲೋಪ ಮಾಡಿಕೊಂಡು ಸಾಂಸ್ಕೃತಿಕತ್ವದಿಂದ ಸಾಮಾಜಿಕತ್ವದ ವಿಶಾಲತೆಯೆಡೆಗೆ ಅವತರಿಸಿ ವ್ಯಾಪಿಸುವುದೇ ಅವುಗಳ ಅಂತರಾಳದ ಧ್ವನಿಯಾಗದೆ.

ದಲಿತ ಆತ್ಮಕತೆಗಳು ಕೇವಲ ಲೇಖಕನಿಂದಲೇ ಅಥವಾ ಬರಹಗಾರನಿಂದಷ್ಟೇ ಓದಿಸಿಕೊಳ್ಳಲು ಸೀಮಿತವಾಗಿರದೆ ಒಂದು ತಳ ಸಂಸ್ಕೃತಿಯ ಪ್ರಾತಿನಿಧಿಕ ಸ್ವರೂಪದ ವ್ಯಾಪಕತೆಯನ್ನು ಹೊಂದಿರುತ್ತವೆ. ಅಲಂಕಾರತ್ವದ ಅಂಶಗಳನ್ನು ದೂರೀಕರಿಸಿ ವಾಸ್ತವ ಅನುಭವವನ್ನು ಹೊಸ ಚಿಂತನೆಯೊಂದಿಗೆ ನಿರೂಪಿಸಿಕೊಡುವ ಒಂದು ಅನುಭವವೇ ಆಗಿರುತ್ತದೆ. “ವಾಸ್ತವತೆಯನ್ನು ಯಾವ ಪೂರ್ವಗ್ರಹವಿಲ್ಲದೆ ಮುಕ್ತ ಮನಸ್ಸಿನ ಮೂಲಕ ಹೇಳಿಕೊಳ್ಳುವ, ಅನುಭವಿಸುವ, ಸ್ವಾತಂತ್ರ್ಯ ಸಮಾನತೆಯನ್ನು ಪ್ರತಿಪಾದಿಸುವ, ಎಲ್ಲಾ ಬಗೆಯ ಶೋಷಣೆಯನ್ನು, ಮನದಾಳದ ನೋವುಗಳನ್ನು ತಾನು ಕಂಡು-ಕೇಳಿ ಅನುಭವಿಸಿದ ಅನುಭವಗಳನ್ನು ಈ ಆತ್ಮಕತೆಗಳು ಹೊಂದಿರುತ್ತವೆ. ಇಂತಹ ನಿರೀಕ್ಷಿತ ಚಿಂತನಾಲಹರಿಗಳನ್ನು ಸಮಕಾಲೀನ ನೆಲೆಯಿಂದ ನೋಡುವುದೇ ಈ ಅಧ್ಯಯನದ ಉದ್ದೇಶವಾಗಿರುತ್ತದೆ. ಎಲ್ಲಾ ಬಗೆಯ ಶೋಷಣೆಯ ವಿರುದ್ಧ ಪ್ರತಿಭಟಿಸುವ ಮನೋಭಾವದ ಜನಕ್ಕೆ ಸ್ಫೂರ್ತಿ ನೀಡುವಂತಹ ಮಾನವೀಯತೆಯನ್ನು ಮುಖ್ಯ ಕಾಳಜಿ ಹಾಗೂ ಆಶಯವಾಗಿರುವ ಜನೋಪಯೋಗಿ ಸಾಹಿತ್ಯವನ್ನು ರಚಿಸಬೇಕೆಂಬುದು ದಲಿತ ಲೇಖಕರ ಆಶಯ.

೧೯೭೦ರ ದಶಕದಲ್ಲಿ ರೂಪಪಡೆದ ದಲಿತ-ಬಂಡಾಯ ಸಾಹಿತ್ಯ ಚಳವಳಿಯ ಹಿಂದಿನ ನವ್ಯಸಾಹಿತ್ಯದ ಧ್ಯೇಯ-ನಿಷ್ಠೆಗಳನ್ನು ಮತ್ತು ರಚನೆಯ ರೀತಿ-ನೀತಿಗಳನ್ನು

ಪ್ರಶ್ನಿಸಿಕೊಂಡು ಹೊಸದೊಂದು ಆಲೋಚನೆಯ ಗಂಭೀರ ಪ್ರಕ್ರಿಯೆಗಳು ದಲಿತ ಸಾಹಿತ್ಯ ಸಂದರ್ಭದಲ್ಲಿ ರೂಪುಗೊಂಡಿದ್ದು ಗಮನಾರ್ಹ ವಿಷಯ ಈ ಹಿನ್ನೆಲೆಯಲ್ಲಿ ದಲಿತ ಆತ್ಮಕತೆಗಳು ಸಾಹಿತ್ಯಿಕವಾದೊಂದು ರೂಪವನ್ನು ಪಡೆದಿದ್ದು ಕೂಡ ಅನಿವಾರ್ಯದ ಸ್ಥಿತಿಯೂ ಕೂಡ ಆಗಿದೆ.

ದಲಿತ ಸಾಹಿತ್ಯ ಸಮುದಾಯ ಚಳವಳಿಯ ಹೊಸ ರೂಪ ಪಡೆದು ತನ್ನ ನೆಲದಲ್ಲಿ ಗಟ್ಟಿಯಾಗಿ ನಿಲ್ಲಲು ಯತ್ನಿಸಿದ್ದು ಸಹ ನೂತನ ಆಗುಹೋಗುಗಳಿಗೆ ಕಾರಣವಾಯಿತು.

ಭಾರತೀಯ ಸಮಾಜದ ಜಾತಿ-ವರ್ಗಗಳ ತಾರತಮ್ಯ, ದಲತ ಶೋಷಣೆ, ಲಿಂಗಾಧಾರಿತ ಅಸಮಾನತೆ, ದಲಿತ ಸಾಹಿತ್ಯ ಸಂದರ್ಭದಲ್ಲಿನ ಸಾಮಾಜಿಕ, ರಾಜಕೀಯ ಸ್ಫೂರ್ತಿಗಳು ಇವೇ ಮುಂತಾದ ವಿಷಯಗಳು ಚಳವಳಿಯ ಮುಖ್ಯ ಧೋರಣೆಯ ಹಿಂದೆ ಪ್ರಭಾವ ಬೀರಿದ ವಿಚಾರಗಳಾಗಿವೆ.

ಆ ಹೊತ್ತಿನ ನಂತರ ೮೦ರ ದಶಕದಲ್ಲಿ ಮರಾಠಿ ಸಾಹಿತ್ಯದ ಆತ್ಮಕತೆಗಳ ಪ್ರೇರಣೆ ಮತ್ತು ಪ್ರಭಾವದಿಂದ ದಲಿತ ಆತ್ಮಕತೆಗಳು ಕನ್ನಡದಲ್ಲಿ ರಚನೆಯಾದವು. ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಗೆ ಪಾಶ್ಚಾತ್ಯ ಲೇಖಕರು ಮತ್ತು ಅವರ ಸಾಹಿತ್ಯ ಕಾರಣವಾದಂತೆ ಕನ್ನಡದ ಮಟ್ಟಿನ ಆತ್ಮಕತೆಗಳಿಗೆ ಮರಾಠಿ ಮತ್ತು ಬಂಗಾಳಿ ಸಾಹಿತ್ಯದಲ್ಲಿ ಹೊಸ ಚೈತನ್ಯವನ್ನು ಗಳಿಸಿಕೊಂಡು ಜನಪ್ರಿಯತೆಯನ್ನು ಪಡೆದವು. ಅದೇ ರೀತಿ ಅನುಕರಣೆಗೊಂಡು ಕನ್ನಡ ಸಾಹಿತ್ಯದಲ್ಲಿಯೂ ಕೂಡ ಆತ್ಮಕತೆಗಳು ಆರಂಭಗೊಂಡವು. ಅವು ಜಾತಿ, ಜನಾಂಗ, ಲಂಗಾಧಾರಿತ ನೆಲೆಯಲ್ಲಿ ವಿಭಿನ್ನಗೊಂಡಂತೆ ದಲಿತ ಆತ್ಮಕತೆಗಳು ಕೂಡ ಉದ್ಭವಗೊಂಡವು. ಕನ್ನಡದಲ್ಲಿ ಆತ್ಮಕತೆಗಳ ಸಾಲಿನಲ್ಲಿ ದಲಿತ ಆತ್ಮಕತೆಗಳು ಅಗತ್ಯವಾದ ರೀತಿಯಲ್ಲಿ ವಿಕಾಸಗೊಂಡು ಬಂದಿವೆ. ಜೀವನದ ಹಲವಾರು ಮುಖಗಳನ್ನು ತನ್ನ ಅನುಭವದ ನೆಲೆಯ ನಿದರ್ಶನಗಳನ್ನಾಗಿ ಕಂಡರಿಸಿವೆ.

ತಮ್ಮ ಬದುಕಿನಲ್ಲಿ ಕಂಡು ಅನುಭವಿಸಿದ ಅನುಭವಗಳನ್ನು ಆತ್ಮಕತೆಗಳಲ್ಲಿ ಹೇಳಿಕೊಂಡಿದ್ದಾರೆ. ಆತ್ಮಕತೆಗಳು ವ್ಯಕ್ತಿಯ ಅನುಭವದ ಜೊತೆಗೆ ಸಮಾಜದ ಸಂಕೀರ್ಣತೆಗಳನ್ನು ತಿಳಿಸುತ್ತವೆ. ಭಾರತದ ಸ್ಥಿತಿಗತಿಗಳನ್ನು ವ್ಯಕ್ತಪಡಿಸುತ್ತದೆ. ಏಕೆಂದರೆ ಮುಂದೊಂದು ಕಾಲಕ್ಕೆ ಬರಹಗಾರರ ಮನಃಸ್ಥಿತಿ ಬದಲಾಗಬಹುದು,

ಬದಲಾಗದಿರಬಹುದು. ಈ ನಿಟ್ಟಿನಲ್ಲಿ ಕೆ.ಗೋವಿಂದರಾಜು, ಸಿದ್ದಲಿಂಗಯ್ಯ ಅರವಿಂದ ಮಾಲಗತ್ತಿ, ತುಂಬಾಡಿ ರಾಮಯ್ಯ, ಸಿ.ಜಿ.ಕೃಷ್ಣಸ್ವಾಮಿ, ಮುನಿವೆಂಕಟಪ್ಪ, ಬಿ.ಟಿ.ಲಲಿತನಾಯಕ್ ಇತ್ಯಾದಿ ದಲಿತ ಆತ್ಮಕತೆಗಾರರು ಪ್ರಸ್ತುತವಾಗುತ್ತಾರೆ.

ಈ ಮೇಲಿನ ಲೇಖಕರ ಆತ್ಮಕತೆಗಳ ಅಧ್ಯಯನದ ಹಿಂದೆ ಕೆಲವೊಂದು ನಿರ್ದಿಷ್ಟವಾದ ಆಲೋಚನೆಗಳಿವೆ. ಬಹಳ ಮುಖ್ಯವಾಗಿ ಜಾತೀಯತೆ, ವರ್ಣವ್ಯವಸ್ಥೆ, ಅಸಮಾನತೆಗಳು, ಬಡತನ ಹಸಿವು ಮುಂತಾದ ವಿಷಯಗಳ ಹಿನ್ನೆಲೆಯಲ್ಲಿ ಆತ್ಮಕಥನಕಾರರ ಪ್ರಕ್ರಿಯೆಯನ್ನು ವಿಶ್ಲೇಷಿಸುವುದು. ಇವರು ಒಂದೇ ಸಾಹಿತ್ಯ ಚಳವಳಿಯ ಕಾಲಘಟ್ಟದವರಾಗಿದ್ದು ಭಿನ್ನ-ಭಿನ್ನ ಪ್ರಾದೇಶಿಕ ಹಿನ್ನೆಲೆಗಳಿಂದ ಬಂದವರಾಗಿದ್ದಾರೆ. ಸಾಹಿತ್ಯ ಮತ್ತು ಸಮಾಜದ ಸಾಂಸ್ಕೃತಿಕತೆಯನ್ನು ಕುರಿತಂತೆ ಕೆಲವು ಸಮಾನಾಸಕ್ತಿಗಳು ಕಂಡರೂ ತಂತಮ್ಮ ಅನುಭವ, ಅಭಿವ್ಯಕ್ತಿ, ಜೀವನ-ತಾತ್ವಿಕತೆ ವಸ್ತುವಿನ ಆಯ್ಕೆ, ನಿರ್ವಹಣೆ, ತಂತ್ರ, ಭಾಷೆಯ ಬಳಕೆ ಮುಂತಾದ ವಿಷಯಗಳಲ್ಲಿ ಪರಸ್ಪರ ಭಿನ್ನವಾಗಿ ತೊಡಗಿಸಿಕೊಂಡಿದ್ದಾರೆ. ಈ ಅಂಶಗಳು ಅದ್ಹೇಗೆ ವಿಭಿನ್ನಾರ್ಥದಲ್ಲಿ ಪ್ರಕಟಗೊಂಡಿವೆ? ಅವರ ನಡುವಣ ಸಾಮ್ಯ ವಿಷಯಗಳೇನು? ಅವರ ಜೀವನ ದೃಷ್ಟಿ ಮುಂತಾದ ವಿಷಯಗಳನ್ನು ಚರ್ಚಿಸುವುದರ ಕಡೆಗೆ ಹೆಚ್ಚು ಗಮನಕೊಡಲಾಗಿದೆ.

ದಲಿತ ಸಾಹಿತ್ಯ ಸಂದರ್ಭದಲ್ಲಿ ದಲಿತ ಆತ್ಮಕತೆಗಳನ್ನು ಬರೆದುಕೊಂಡವರಿಗಿಂತ ಸದ್ದಲಿಂಗಯ್ಯ, ತುಂಬಾಡಿ ರಾಮಯ್ಯ ಇವರಿಬ್ಬರು ಭಿನ್ನವಾದ ನೆಲೆಯಲ್ಲಿ ಕಾಣಿಸುವುದನ್ನು ಗುರ್ತಿಸಬಹುದು. ಇವರ ಆತ್ಮಕತೆಗಳ ವಿಶ್ಲೇಷಣೆ ಸಾಮ್ಯತೆಯೊಂದಿಗೆ ಓದುಗರನ್ನು ತಣ್ಣನೆಯ ನೋವಿನೊಂದಿಗೆ ಓದಿಸಿಕೊಳ್ಳುತ್ತವೆ. ಕಾಲಮಾನದ ದೃಷ್ಟಿಯಿಂದ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗತಿಗಳು ಸಂಕ್ರಮಣದ ಹಂತದಲ್ಲಿದ್ದು ಇವರ ಕಥಾರಚನೆಯ ಮೇಲೆ ಪರಿಣಾಮವನ್ನು ಬೀರಿವೆ. ವಸ್ತು ಒಂದೇ ಆದರೂ ನಿರೂಪಣಾ ವಿಧಾನ ಬೇರೆಯಾಗಿದೆ.

ಈ ಪ್ರಬಂಧದಲ್ಲಿ ಒಟ್ಟು ೮ ಅಧ್ಯಾಯಗಳನ್ನು ಮಾಡಿಕೊಂಡಿದ್ದೇನೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಎರಡನೇ ಅಧ್ಯಾಯದಲ್ಲಿ ದಲಿತ ಆತ್ಮಕತೆಗಳ ಸ್ವರೂಪ, ಮೂರನೇ ಅಧ್ಯಾಯದಲ್ಲಿ ದಲಿತ ಆತ್ಮಕತೆಗಳಿಗೆ ಪ್ರೇರಣೆ ಮತ್ತು ಪ್ರಭಾವ, ನಾಲ್ಕನೇ ಅಧ್ಯಾಯದಲ್ಲಿ 'ಕನ್ನಡ ಆತ್ಮಕತೆಗಳಲ್ಲಿ ದಲಿತ ಆತ್ಮಕತೆಗಳ ಸ್ಥಾನ, ಐದನೇ ಅಧ್ಯಾಯದಲ್ಲಿ ವ್ಯಷ್ಟಿ ನೆಲೆಯಿಂದ ಸಮಷ್ಟಿ ನೆಲೆಗೆ ಆತ್ಮಕತೆಗಳ ಮಿಡಿತ, ಆರನೆ

ಅಧ್ಯಾಯದಲ್ಲಿ 'ಎರಡು ಆತ್ಮಕತೆಗಳ ಅಂತರಾಳ ಮತ್ತು ವಿಮರ್ಶೆ, ಏಳನೇ ಅಧ್ಯಾಯದಲ್ಲಿ ಆತ್ಮಕತೆಗಳ ಪರಸ್ಪರ ತೌಲನಿಕ ವಿಶ್ಲೇಷಣೆ ಹಾಗೂ ಕಡೆಯ ಅಧ್ಯಾಯದಲ್ಲಿ ಅಧೀನ ಸಂಸ್ಕೃತಿಯ ನೆಲೆಯಲ್ಲಿ ಪ್ರಧಾನತ್ವದ ಅಂಶಗಳು ಹೀಗೆ ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು ಉಪಸಂಹಾರ ಮತ್ತು ಪರಾಮರ್ಶನ ಗ್ರಂಥಗಳೊಂದಿಗೆ ಮುಕ್ತಾಯಗೊಂಡಿದೆ.

*****

## ಅಧ್ಯಾಯ ೨

# ದಲಿತ ಆತ್ಮಕತೆಗಳ ಸ್ವರೂಪ

'ದಲಿತ' ಎಂಬ ಪದ ಕಿವಿಗಳಿಗೆ ಬೀಳುತ್ತಿದ್ದಂತೆಯೇ ದರಿದ್ರ, ಶೂದ್ರ, ಬಡವ ಎಂದೆಲ್ಲಾ ಅರ್ಥಗಳು ತತ್‌ಕ್ಷಣ ನಮ್ಮ ಗಮನಕ್ಕೆ ಬರುತ್ತವೆ. ಎಪ್ಪತ್ತರ ದಶಕದ ಪುಸ್ತಕಗಳನ್ನು ತೆಗೆದರೆ ನಾವುಬೆಕ್ಕಸ ಬೆರಗಾಗ ನೋಡುವಂತೆ ಇಡೀ ಒಂದು ತಲೆಮಾರಿನ ದಲಿತರ ಬದುಕಿನ ವಸ್ತುಸ್ಥಿತಿಯನ್ನು ಯಾವುದೇ ಹಿಂಜರಿಕೆಯಿಲ್ಲದೆ ಹೇಳುತ್ತವೆ. ಈ ಆತ್ಮಕತೆಗಳು ನೆನಪನ್ನು ಮುಖ್ಯವಸ್ತುವನ್ನಾಗಿ ಹೇಳುತ್ತವೆ. ಅಂದರೆ ಬಾಲ್ಯ, ಕಾಡಿರುವಂತಹ ನೆನಪುಗಳು, ವಿಚಿತ್ರವಾದ ಉಲ್ಲಾಸ, ಜಾತಿಯ ಹೆಸರಿನ ನಿಂದನೆಗಳು, ಜಗಳ ಮುಂತಾದ ಅಂಶಗಳು ದಲಿತ ಆತ್ಮಕತೆಗಳ ವಸ್ತುಗಳಾಗಿವೆ.

"ದಲಿತ ಆತ್ಮಕತೆಗಳಲ್ಲಿ ಅಸ್ಪೃಶ್ಯತೆ ಸ್ಥಾಯಿಭಾವ ಎಂದು ಒಂದೇ ಮಾತಿನಲ್ಲಿ ಹೇಳಬಹುದು. ಅಸ್ಪೃಶ್ಯತೆಯ ಹಿನ್ನೆಲೆಯಲ್ಲಿ ಬಂದ ಲೇಖಕರು ತಮ್ಮ ಅನುಭವದ ನಿರೂಪಣೆಯನ್ನು ತಮ್ಮ ಆತ್ಮಕತೆಗಳಲ್ಲಿ ನೀಡಿರುವುದನ್ನು ದಲಿತ ಸಾಹಿತ್ಯದ ಪ್ರಮುಖ ಭಾಗವಾಗಿ ಕಾಣಬಹುದು. ಶತಮಾನಗಳ ನೋವನ್ನು ಹತ್ತಿಕ್ಕಿದ್ದ ಸ್ವಾಭಿಮಾನಿ ದಲಿತನೊಬ್ಬ ತನ್ನ ತಲೆಮಾರಿನ ಅನುಭವವನ್ನು ತನ್ನದಾಗಿಸಿಕೊಂಡು ತನ್ನ ಅಳಲನ್ನು ವಾಕರಿಕೆ ಮಾಡಿಕೊಳ್ಳದೇ ತತ್‌ಕ್ಷಣದ ತುರ್ತು, ಈ ತುರ್ತಿನ ವಾಕರಿಕೆಗೆ ಒಂದು ದಶಕ ಹಿಡಿಯಬಹುದು"[೧]

"ದಲಿತರ ಬರವಣಿಗೆಯಲ್ಲಿ ವಸ್ತುನಿಷ್ಠ ನಿರ್ಲಿಪ್ತತೆಯನ್ನು ಕಾಯ್ದುಕೊಂಡು ಬಂದರೆ ಅದು ಕಾಲದ ಪ್ರಮಾಣವನ್ನು ಗೆಲ್ಲುವುದು. ಇಲ್ಲ ಸಂವೇದನಾಶೀಲತೆ ಮುಖ್ಯವಾಗುತ್ತದೆ.

ಎಸ್.ಆರ್.ವಿಜಯಶಂಕರ ಅವರ ಮಾತುಗಳನ್ನು ಇಲ್ಲಿ ಗಮನಿಸಬಹುದು. ಕನ್ನಡ ಸಾಹಿತ್ಯದಲ್ಲಿ ಈ ತನಕ ಇರದಿದ್ದ ಒಂದು ಕತ್ತಲಿನ ಲೋಕದಿಂದ ಬಂದ

---

೧. ದಲಿತ ಮಾರ್ಗ, ಸಂ. ಅರವಿಂದ ಮಾಲಗತ್ತಿ, ಪುಟ. ೧೨೭.

ಲೇಖಕರು ಅವರ ಅನುಭವವನ್ನು ಒರಟಾಗಿ ಬರೆಯುತ್ತಾರೆ. ಇವರಿಗೆ ನಾಜೂಕು ಬೇಡ; ಅವರ ಅನುಭವ ನಾಜೂಕಿನದಲ್ಲ"[೧]

ದಲಿತ ಆತ್ಮಕತೆಗಳಿಗೆ ಈ ಮಾತು ತುಂಬಾ ಒಪ್ಪಿತವಾದುದ್ದಾಗಿದೆ. ತಮ್ಮ ಜೀವನ ಅನುಭವವನ್ನು ಯಥಾವತ್ತಾಗಿ ಹಿಡಿದಿಟ್ಟರುವುದು ಕಂಡುಬರುತ್ತದೆ. ಅನುಭವಿಸಿದ ನೋವನ್ನು ಹೇಳಲು ಯಾವುದೇ ಸಂಕೋಚವನ್ನು ಪಟ್ಟುಕೊಳ್ಳದ ನಿರಾಡಂಬರವಾಗಿ ತಮ್ಮ ನೋವಿಗೆ ಹದವಾದ ಅಭಿವ್ಯಕ್ತಿಯನ್ನು ಈ ಆತ್ಮಕತೆಗಳಲ್ಲಿ ಕಾಣಬಹುದಾಗಿದೆ.

ಸಿದ್ಧಲಿಂಗಯ್ಯ ಅವರ 'ಊರು-ಕೇರಿ' ಆತ್ಮಕತೆಯೂ ಸಹ ತಮ್ಮ ಜೀವನದ ಅನುಭವದ ಜೊತೆಗೆ ಸುತ್ತಲಿನ ಜನಜೀವನವನ್ನು ಪ್ರತಿಬಿಂಬಿಸುವ ಒಂದು ಮುಖ್ಯ ಕೃತಿಯಾಗಿ ಕಾಣುತ್ತದೆ. ಅಂದರೆ ಆತ್ಮಕತೆಯ ಸ್ವರೂಪ ಜೀತಪದ್ಧತಿ, ನಂಬಿಕೆ, ಆರ್ಥಿಕ ಮುಗ್ಗಟ್ಟು, ವರ್ಗಸಂಘರ್ಷ, ಹಾಸ್ಟೆಲ್ ಜೀವನ, ಜಾತೀಯತೆ, ಅಸ್ಪೃಶ್ಯತೆ, ಹೋರಾಟ ಮುಂತಾದ ನೆಲೆಗಳನ್ನು ಈ ಆತ್ಮಕತೆಗಳಲ್ಲಿ ಗುರ್ತಿಸುತ್ತೇವೆ. ತನ್ನ ವಿಷಯದ ಸ್ವರೂಪವನ್ನು ಒಂದು ಪ್ರತಿಭಟನೆಯ ಹಂತಕ್ಕೆ ತೆಗೆದುಕೊಂಡು ಹೋಗಿ ನಿಲ್ಲಿಸುತ್ತವೆ.

ಒಡೆದುಹೋದ ಸಮುದಾಯದ ದಾರುಣ ಕತೆಯನ್ನು ಹೊಂದಿರುವುದರ ಜೊತೆಗೆ ಭವಿಷ್ಯಕ್ಕೆ ಬೆಳೆಯಬೇಕೆನ್ನುವ ಚಲಿಸಬೇಕೆನ್ನುವ ಆಶಯಕ್ಕಿಂತ ವರ್ತಮಾನವನ್ನು ಕಟ್ಟುವ ಕ್ರಿಯೆ ಆತ್ಮಕತೆಗಳಲ್ಲಿ ಮುಖ್ಯವಾಗುತ್ತದೆ. ಲೇಖಕನಿಗೆ ತನ್ನ ವೈಯಕ್ತಿಕ ಅನುಭವ ಮುಖ್ಯವಾಗಿರುವುದರ ಜೊತೆಗೆ ಒಂದು ಸಮುದಾಯದ ಪ್ರಾತಿನಿಧಿಕ ಸ್ವರೂಪವನ್ನು ದಲಿತ ಆತ್ಮಕತೆಗಳಲ್ಲಿ ಕಟ್ಟಿಕೊಡಬೇಕೆಂಬ ಆಶಯವು ಮುಖ್ಯವಾಗಿರುತ್ತದೆ. ಮೊದಲೇ ಹೇಳಿದಂತೆ ಸಾಂಸ್ಕೃತಿಕ ಮನೋರಂಜನೆ-ಯನ್ನು ಅಕ್ಷರ ರೂಪಕ್ಕೆ ತಂದು ವೃದ್ಧಾಪ್ಯದಲ್ಲಿ ಓದುವುದಲ್ಲ. ಅದರ ಅಂತರಾಳದಲ್ಲಿ ಒಂದು ನೋವಿನ ಆ ನೋವಿಗೊಂದು ಉತ್ತರವನ್ನು, ಸಮಾಧಾನವನ್ನು ಎಂದಾದರೊಮ್ಮೆ ಪಡೆಯಲು ಸಾಧ್ಯವೇ? ಎಂಬ ಆಶಯವನ್ನು ಈ ದಲಿತ ಆತ್ಮಕತೆಗಳು ಹೊಂದಿರುತ್ತವೆ. ಸಾವಿಗೊಂದು ಮುಕ್ತಿ, ಬಡತನಕ್ಕೊಂದು ಬೆಳಕನ್ನು ಆತ್ಮಕತೆಗಳು ಸಹೃದಯದಿಂದ ನಿರೀಕ್ಷಿಸುತ್ತಿವೆ ಎಂಬಂತೆ ಆತ್ಮಕತೆಗಳ ಅಂಗಳದಲ್ಲಿ ತೋರುತ್ತಿರುತ್ತವೆ. ಮರಾಠಿ, ಬಂಗಾಳಿ ಸಾಹಿತ್ಯದ ಆತ್ಮಕತೆಗಳು ರೊಚ್ಚು ಆವೇಶವನ್ನು ನೀಡಿದರೆ ಕನ್ನಡದ ಪಾಲಿನ

---

೧. ದಲಿತ ಮಾರ್ಗ, ಸಂ. ಅರವಿಂದ ಮಾಲಗತ್ತಿ, ಪು.೧೨೮.

ದಲಿತ ಆತ್ಮಕತೆಗಳು ಸೌಮ್ಯ ಸ್ವಭಾವದ ಕಡೆಗೆ ಸಾಗಿವೆ. ಹಾಗೆಂದು ಓದುಗರನ್ನು ಅಷ್ಟೊಂದು ಸೌಮ್ಯವಾಗಿ ಇಡಲಾರವು. ಹಾಗೆಯೇ ಅನಗತ್ಯ ಸಮಾಜವನ್ನು ಎದುರಿಸಲು ಅಸಾಧ್ಯವೆಂದಾಗಲಿ, ಒಪ್ಪಿಕೊಂಡಿವೆ ಎಂದಾಗಲಿ ಅರ್ಥೈಸಲಾಗುವುದಿಲ್ಲ.

ಒಟ್ಟಾರೆ, ದಲಿತ ಆತ್ಮಕತೆಗಳು ನೋವು, ಬಡತನ, ಜೀತಪದ್ಧತಿ, ಜಾತಿಪದ್ಧತಿ, ಆರ್ಥಿಕ, ರಾಜಕೀಯ, ಸಾಮಾಜಿಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿ ಕಂಗಾಲಾದ ಬದುಕನ್ನು ಸಾಮಾಜಿಕರಿಗೆ ಹೇಳುವ, ಅದಕ್ಕೆಂದು ಅದಕ್ಕೊಂದು ಉತ್ತರರೂಪವನ್ನು ನಿರೀಕ್ಷಿಸುವ ಹೆಬ್ಬಯಕೆಯನ್ನು ಹೊಂದಿವೆ. ಅರವಿಂದ ಮಾಲಗತ್ತಿ, ಸಿದ್ಧಲಿಂಗಯ್ಯ, ತುಂಬಾಡಿರಾಮಯ್ಯ, ಕೆ.ಗೋವಿಂದರಾಜು, ಮುನಿವೆಂಕಟಪ್ಪ, ಸಿ.ಜಿ.ಕೆ. ಮುಂತಾದ ದಲಿತ ಲೇಖಕರ ಆತ್ಮಕತೆಗಳು ಸಾಮಾಜಿಕ ಅನಿಷ್ಟಗಳ ವಿರುದ್ಧದ ಧ್ವನಿಯಾಗಿರುವುದು ಎಲ್ಲರೂ ಅರಿಯಬೇಕಾದ ಅರಿತ ವಿಷಯವಾಗಿವೆ.

*****

# ಅಧ್ಯಾಯ ೩.

# ದಲಿತ ಆತ್ಮಕತೆಗಳಿಗೆ ಪ್ರೇರಣೆ

ದಲಿತ ಆತ್ಮಕತೆಗಳು ಮೊದಲು ಮೊಳಕೆಯೊಡೆದಿದ್ದು ಮರಾಠಿ ದಲಿತ ಆತ್ಮಕತೆಗಳಿಂದ. ಈ ಮೊಳಕೆ ಹುಲುಸಾಗಿ ಬೆಳೆದು ಫಸಲನ್ನು ನೀಡಿ ಸುಗ್ಗಿಯ ಹಬ್ಬವನ್ನೇ ಆಚರಿಸಿದವು. ಸಾಮಾಜಿಕ ಅನ್ಯಾಯದ ವಿರುದ್ಧ ಆತ್ಮಕತೆಯನ್ನು ಬರೆಯಬೇಕೆಂಬ ಚಿಂತನೆ ಮರಾಠಿ ದಲಿತ ಲೇಖಕರಲ್ಲಿ ಮೂಡಿದ್ದೇ ಒಂದು ಇತಿಹಾಸ. ಪ್ರಸಿದ್ಧವಾದ ಹೊಸಅಲೆ ಎಂದು ಕರೆಯಬಹುದು. ಮನಸ್ಸನ್ನು ನಡುಗಿಸುವ ಅಜ್ಞಾತ ಬದುಕೊಂದು ಇವುಗಳಲ್ಲಿ ಅನಾವರಣಗೊಂಡಿದೆ. ತಮ್ಮ ಸಮುದಾಯದ ಜನರ ಘೋರವಾದ ನೋವು-ಅಪಮಾನಗಳನ್ನು ಈ ದಲಿತ ಲೇಖಕರು ತಮ್ಮ ಆತ್ಮಕತೆಗಳಲ್ಲಿ ದಾಖಲಿಸಿದರು. ಈ ಹಿನ್ನೆಲೆಯಲ್ಲಿ ಬಾಲಚಂದ್ರ ಫಡಕೆ "ಅವರು ದಲಿತ ಆತ್ಮಕತೆಗಳನ್ನು ನೋವಿನ ಕತೆಗಳೆಂದು ಕರೆದಿದ್ದಾರೆ." ತಮ್ಮ ಬದುಕಿನ ಆಗುಹೋಗುಗಳ ಮೇಲೆ ಸುತ್ತಲಿನ ಪರಿಸರ ಮತ್ತು ಸಾಂಪ್ರದಾಯಿಕ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆ ಎಂತಹ ವಿಷಯಕಾರಿ ಪರಿಣಾಮ ಬೀರಿದೆ ಎಂಬುದನ್ನು ಹೇಳುವುದು ಇವುಗಳ ತುರ್ತಾದ ತುಡಿತವಾಗಿದೆ. ತಮ್ಮ 'ಅನ್‌ಟಚಬಲ್' ಬದುಕಿನ ಘೋರವಾಸ್ತವವನ್ನು ಕಥೆಕಾದಂಬರಿಗಳ ಮೂಲಕ ಸಾಮಾನ್ಯವಾಗಿ ಅಭಿವ್ಯಕ್ತಿಸು-ವುದಕ್ಕಿಂತ ಅದನ್ನು ನೇರವಾಗಿ ಆತ್ಮಕತೆಯ ರೂಪದಲ್ಲಿ ಅಭಿವ್ಯಕ್ತಿಸುವುದೇ ಹೆಚ್ಚು ಪರಿಣಾಮಕಾರಿ ಎಂಬುದನ್ನು ಮರಾಠಿ ದಲಿತ, ಲೇಖಕರು ಕಂಡುಕೊಂಡರು ಮತ್ತು ಅದರಲ್ಲಿ ಅವರು ಯಶಸ್ಸನ್ನು ಸಾಧಿಸಿದರು. ಅವರ ಆತ್ಮಕತೆಗಳು ಸಾಹಿತ್ಯ ಕ್ಷೇತ್ರದಲ್ಲಿ ತೀವ್ರತರ ಪರಿಣಾಮವನ್ನು ಬೀರಿ ಹೊಸ ಅಲೆಯನ್ನೇ ಎಬ್ಬಿಸಿದವು.

ಕನ್ನಡ ದಲಿತ ಆತ್ಮಕತೆಗಳು ತಲೆ ಎತ್ತಬೇಕಾದರೆ ಮರಾಠಿ ದಲಿತ ಆತ್ಮಕತೆಗಳು ಅತ್ಯಂತ ಪ್ರೇರಣೆ ಮತ್ತು ಪ್ರಭಾವವನ್ನು ಬೀರಿದವು. ಇಂಗ್ಲಿಷ್ ಸಾಹಿತ್ಯ ಪ್ರಸಾರವಾದಂತೆ ಅಕ್ಷರಸ್ಥ ಕೆಲವು ದಲಿತ ಲೇಖಕರು, ವಿದ್ಯಾವಂತರು. ಮರಾಠಿ ಮತ್ತು ಬಂಗಾಳಿ ಸಾಹಿತ್ಯವನ್ನು ಅಧ್ಯಯನ ನಡೆಸಿದರು. ಅಧ್ಯಯನದ ಪರಿಣಾಮವಾಗಿ ಅಲ್ಲಿನ ಅಸ್ಪೃಶ್ಯತೆಯನ್ನು, ನೋವು ದಿಕ್ಕಿಲ್ಲದ ಬದುಕು ಎಲ್ಲವನ್ನು ದಲಿತ ಆತ್ಮಕತೆಗಳಲ್ಲಿ ಓದಿದರು. ಇದರ ಪರಿಣಾಮವಾಗಿ ಕನ್ನಡದಲ್ಲಿ ದಲಿತ ಆತ್ಮಕತೆಗಳು ತಲೆ ಎತ್ತಲು ಕಾರಣವಾಯಿತು.

ಮರಾಠಿಯ ಶರಣಕುಮಾರ ಅಂಬಾಳೆಯವರ 'ಅಕ್ಕರ ಮಾಶಿ'ಯನ್ನು ದು.ನಿಂ.ಬೆಳಗಲಿ 'ಅಕ್ರಮ ಸಂತಾನ' ಎಂಬ ಹೆಸರಿನಲ್ಲಿ ೧೯೯೩ರಲ್ಲಿ ಅನುವಾದಿಸಿದರು. ೧೯೯೪ರಲ್ಲಿ ಲಕ್ಷ್ಮಣ ಗಾಯಕವಾಡ ಅವರ 'ಉಚಲ್ಯಾ'ವನ್ನು ಚಂದ್ರಕಾಂತ ಪೋಕಳೆ ಅನುವಾದಿಸಿದರು. ಮಹಾರಾಷ್ಟ್ರದ ಸಾಹಿತ್ಯದಲ್ಲಿ ಒಂದು ಹೊಸ ಅಲೆಯನ್ನು ಕಲಿತ ಅಥ್ಮಕತೆಗಳು ಎಬ್ಬಿಸಿದವು. ಇವುಗಳಲ್ಲಿ ರೂಪುಗೊಂಡಿರುವ ಸಾವಿರಾರು ಅನುಭವಗಳು ಕನ್ನಡದ ದಲಿತ ಲೇಖಕರನ್ನು ಬಡಿದೆಬ್ಬಿಸಿದವು.

"ಡಾ. ಹೆಚ್.ಎಸ್.ರಾಘವೇಂದ್ರ ಅವರ ಪ್ರಕಾರ ಬಹುಶಃ ಕನ್ನಡದಲ್ಲಿ ದಲಿತರು ತಮ್ಮ ಸೃಜನಶೀಲ ಕೃತಿಗಳು ಬೇರೆ ಬೇರೆ ಓದುಗರಿಗೆ ಬೇರೆ ಬೇರೆ ಸ್ತರಗಳಲ್ಲಿ ಭಿನ್ನ ಭಿನ್ನ ನೆಲೆಯಲ್ಲಿ ದಲಿತಾನುಭವದ ಅನೇಕ ಸಾಧ್ಯತೆಗಳನ್ನು ತಂದುಕೊಡಬಲ್ಲವು ಎಂಬುದು ಸುಳ್ಳಲ್ಲ."[೧]

ಈ ರೀತಿಯ ಮಾತುಗಳ ಸಂದರ್ಭದಲ್ಲಿ ಮರಾಠಿ ದಲಿತ ಆತ್ಮಕತೆಗಳಾದ 'ಉಚಲ್ಯಾ', 'ಅಕ್ರಮ ಸಂತಾನ' ಇವು ಕನ್ನಡಕ್ಕೆ ಅನುವಾದಗೊಂಡದ್ದು ಒಂದು ದೊಡ್ಡಭಾಗವಾಯಿತು. ಈ ಕೃತಿಗಳು ದಲಿತರ ಬದುಕನ್ನು ಮುಕ್ತವಾಗಿ ಒಂದು ಸಮುದಾಯದೊಂದಿಗೆ ಒಟ್ಟಂದದಲ್ಲಿ ಕಾಣಿಸುವ ಪ್ರಯತ್ನ ಮಾಡಿದ್ದಾರೆ.

ಇಂಥ ಸಂದರ್ಭದಲ್ಲಿ ಕನ್ನಡ ಲೇಖಕರಲ್ಲಿ ಈ ರೀತಿ ಆಸೆ ಮೊಳಕೆಯೊಡೆದು ನಾವೂ ಏಕೆ ಬರೆಯಬಾರದೆಂಬ ಆಕಾಂಕ್ಷೆಯಿಂದ ಕನ್ನಡ ಸಾಹಿತ್ಯ ಸಂದರ್ಭದ ಪ್ರಸಿದ್ಧ ಲೇಖಕರಾದ ಡಾ. ಅರವಿಂದ ಮಾಲಗತ್ತಿ ಅವರ 'ದಿ ಗೌರ್ಮೆಂಟ್ ಬ್ರಾಹ್ಮಣ' ಆತ್ಮಕತೆಯನ್ನು ೧೯೯೪ರಲ್ಲಿ ಮೊದಲಿಗೆ ಬರೆದರು. ಇವರು ಮರಾಠಿ ದಲಿತ ಆತ್ಮಕತೆಗಳ ಪ್ರಭಾವದಿಂದ ತಮ್ಮ ಬಾಲ್ಯ, ಯೌವ್ವನದ ಅನುಭವವನ್ನು ಯಾವುದೇ ಸಂಕೋಚವಿಲ್ಲದೆ ಮುಕ್ತ ಮನಸ್ಸಿನಿಂದ ತಮ್ಮ ಅತ್ಮಕತೆಯನ್ನು ಬರೆದುಕೊಂಡಿದ್ದಾರೆ. ಈ ಕೃತಿಯಲ್ಲಿ ದಲಿತ ಸಮುದಾಯದ ಒಂದು ಪ್ರದೇಶದಲ್ಲಿ ಶೋಷಣೆಗೆ ಒಳಪಟ್ಟ ಜನರ ಧನಿಯೊಂದಿಗೆ ಆತ್ಮಕತೆ ಹೊಸ ಹೊಸ ಚಿಂತನೆಯೊಂದಿಗೆ ಹೊಸ ತಿರುವನ್ನು ಪಡೆದುಕೊಂಡಿದೆ. ಸಮಾಜದ ನಿಂದನೆಗೆ ಒಳಪಟ್ಟ ಜನರನ್ನು 'ಸರ್ಕಾರಿ ಬ್ರಾಹ್ಮಣ' ಎಂದು ಕರೆದಿರುವುದೇ ಒಂದು ದೊಡ್ಡ ಚಿಂತನೆಯೇ ಸರಿ. ಅನಂತರ ೧೯೯೭ರಲ್ಲಿ

---

೧.ನೋವು ಹೆತ್ತ ಪ್ರೀತಿ, ಸಂಗ್ರಹ. ಅಪ್ಪಗೆರೆ ಸೋಮಶೇಖರ, ನರೇಂದ್ರಕುಮಾರ್, ಪು.೨೯

ಡಾ. ಸಿದ್ಧಲಿಂಗಯ್ಯ ಅವರ 'ಊರುಕೇರಿ' ಆತ್ಮಕತೆ ಹೊರಬಂತು. ಇದು ಸಹ ತಮ್ಮ ಸಮುದಾಯದ ಅನುಭವಗಳನ್ನು , ಕಷ್ಟ-ಶೋಷಣೆ, ಅಪಮಾನ ಇವೇ ಮುಂತಾದ ದಲಿತಾನುಭವ ಬದುಕನ್ನು ಅಂಜು ಅಳುಕಿಲ್ಲದೆ ನೇರವಾಗಿ ಬರೆಯುತ್ತಾರೆ. ದಲಿತರ ಕಷ್ಟ-ಕಾರ್ಪಣ್ಯಗಳು, ಕೂಳಿಲ್ಲದ (ಅನ್ನ) ಸ್ಥಿತಿ. ನಿಂದನಾರ್ಹ ಕೋಟಲೆಗಳನ್ನು 'ಊರುಕೇರಿ' ಆತ್ಮಕತೆಯಲ್ಲಿ ದಾಖಲುಪಡಿಸುತ್ತಾರೆ. ೧೯೯೯ರಲ್ಲಿ ತುಂಬಾಡಿ ರಾಮಯ್ಯ ಅವರು 'ಮಣೆಗಾರ' ಆತ್ಮಕತೆಯನ್ನು ಬರೆದರು. ಇವರು ಈ ಹಿಂದೆ ಬಂದ ಕೃತಿಗಳಿಗಿಂತ ಭಿನ್ನವಾಗಿ ತಮ್ಮ ಕೃತಿಯ ಶಿರೋನಾಮದಿಂದಲೂ ತಮ್ಮ ಸೃಜನಾಶೀಲತೆಯನ್ನು ತೋರಿದ್ದಾರೆ. ಇವರು ತಮ್ಮ ಜೀವನದಲ್ಲಿ ಅನುಭವಿಸಿದ ಬಡತನ, ನೋವು, ಶೋಷಣೆ ಮುಂತಾದ ಅನುಭವಗಳನ್ನು ಯಾವುದೇ ಪ್ರತಿಕ್ರಿಯೆಯನ್ನು ತೋರದೇ ತೀರ ಸಾಮ್ಯವಾಗಿ ತಮ್ಮ ಬರಹವನ್ನು ಹಿಡಿದಿಟ್ಟಿರುವುದು ಗೋಚರಿಸುತ್ತದೆ. ೨೦೦೦ನೆ ಇಸವಿಯಲ್ಲಿ ಕೆ.ಗೋವಿಂದರಾಜು ಅವರು 'ಮನವಿಲ್ಲದವರ ಮಧ್ಯೆ' ಎಂಬ ಆತ್ಮಕತೆಯನ್ನು ಬರೆದರು. ಇದರಲ್ಲಿ ತಾವು ಜನಿಸಿದ ಅಂತರ್ ಸಂಬಂಧದಿಂದ ಹಿಡಿದೂ ತಾವು ಜೈಲಿನಲ್ಲಿ ಕಾಲಕಳೆದು ಅನಗತ್ಯವಾಗಿ, ನಿರಪರಾಧಿಯಾಗಿ ತಾವು ಅನುಭವಿಸಿದ ಗೋಳಿನ ಕಥೆಯನ್ನು ದಾಖಲಿಸಿದ್ದಾರೆ. ೨೦೦೨ರಲ್ಲಿ ಸಿ.ಜಿ.ಕೆ. ಅವರ 'ಕಿತ್ತಾಳೆ ಬೆಳದಿಂಗಳೊಳಗ' ಪ್ರಕಟವಾಯಿತು. ನಂತರ ಮುನಿವೆಂಕಟಪ್ಪನವರ 'ಅಂತ್ಯಜನ ಅಂತರಂಗ' ಬಿಡುಗಡೆಯಾದವು. ಮುಂದುವರೆದು ಸಿದ್ದಲಿಂಗಯ್ಯನವರು 'ಊರುಕೇರಿ ಭಾಗ-೨ನ್ನು ಪ್ರಕಟಗೊಳಿಸಿದರು.

ಈ ರೀತಿಯಲ್ಲಿ ದಲಿತ ಆತ್ಮಕತೆಗಳು ಬಾಲ್ಯದಿಂದ ಪ್ರಾರಂಭವಾಗಿ ಯಾತನೆಯನ್ನು ಅನುಭವಿಸಿ ನಂತರ ಸ್ವಪ್ರಯತ್ನದಿಂದ ಮೇಲಿನ ಸ್ತರವನ್ನು ತಲುಪಿದ ಹಂತದವರೆಗೆ ದಲಿತ ಆತ್ಮಕತೆಗಳಲ್ಲಿ ಅಭಿವ್ಯಕ್ತಿಯನ್ನು ಪಡೆದುಕೊಂಡಿವೆ. ಸೌಮ್ಯವಾದ ಪ್ರತಿಭಟನೆಯನ್ನು ತೋರುವ ರೀತಿಯಲ್ಲಿ ಆತ್ಮಕತೆಗಳು ಕಂಡುಬರುವುದು, ಬಂದಿರುವುದು ಗೋಚರಿಸುತ್ತದೆ.

ಒಟ್ಟಾರೆ ದಲಿತ ಆತ್ಮಕತೆಗಳು ಕನ್ನಡದಲ್ಲಿ ತಲೆಯೆತ್ತಿ ಬೆಳೆಯಲು ಹಾಗೂ ಕನ್ನಡದ ದಲಿತ ಲೇಖಕರಿಗೊಂದು ಎದೆಗಾರಿಕೆಯ ಶಕ್ತಿಯನ್ನು ನೀಡಿ, ನೇರವಾಗಿ, ಕೊಂಕಿಲ್ಲದೆ ತಮ್ಮ ಆತ್ಮಕತೆಗಳನ್ನು ರಚಿಸಲು ಪ್ರೇರಣೆಯನ್ನು ನೀಡಿದವು. ಬಹುಶಃ

ಮರಾಠಿ ದಲಿತ ಆತ್ಮಕತೆಗಳು ಕನ್ನಡದ ಲೇಖಕರಿಗೆ ಪರಿಚಿತವಾಗದಿದ್ದರೆ ಕನ್ನಡದ ಆತ್ಮಕತೆಗಳು ಬಹುಬೇಗ ರಚನೆಯಾಗುತ್ತಿರಲಿಲ್ಲವೇನೂ? ಅದೇನೆ ಇರಲಿ ಮರಾಠಿ ದಲಿತ ಆತ್ಮಕತೆಗಳು ಕನ್ನಡದ ದಲಿತ ಆತ್ಮಕತೆಗಳಿಗೊಂದು ದಿಕ್ಕು-ದೆಸೆಯನ್ನು ತೋರಿದ್ದೇ ಒಂದು ಮೈಲಿಗಲ್ಲು ಎಂದು ಸಂಶಯವಿಲ್ಲದೇ ಹೇಳಬಹುದು.

## ಅಧ್ಯಾಯ ೪

# ಕನ್ನಡ ಆತ್ಮಕತೆಗಳಲ್ಲಿ ದಲಿತ ಆತ್ಮಕತೆಗಳ ಸ್ಥಾನ

ಸಾಹಿತ್ಯ ಪ್ರಾರಂಭವಾದಂದಿನಿಂದ ಕಾಲದಿಂದ ಕಾಲಕ್ಕೆ ಸಾಹಿತ್ಯ ಪ್ರಕಾರಗಳು ಜನಿಸಿ ಪಕ್ವವಾದ ರೂಪವನ್ನು ಪಡೆದು ಸಾಹಿತ್ಯದ ವಿವಿಧ ಪ್ರಕಾರ ವಲಯಗಳಾಗಿ ವಿಭಾಗಗೊಂಡವು. ನವೋದಯ, ನವ್ಯ, ಪ್ರಗತಿಶೀಲ, ದಲಿತ ಬಂಡಾಯ, ಸ್ತ್ರೀವಾದಿ ಸಂವೇದನಾ ಸಾಹಿತ್ಯಗಳು ವಿವಿಧ ವಲಯಗಳಾದಂತೆ ಆಯಾಯ ಕಾಲದಲ್ಲಿ ಕಥೆ, ಕಾದಂಬರಿ, ನಾಟಕ, ಕಾವ್ಯ ಹೀಗೆಲ್ಲಾ ಸಾಹಿತ್ಯ ಪ್ರಕಾರಗಳಾದಂತೆ ಆತ್ಮಕತೆ ಪ್ರಕಾರವು ಕೂಡ ಒಂದಾಗಿದೆ. ಮಹಿಳಾ ಸಾಹಿತ್ಯದಲ್ಲಿ ಮುಸ್ಲಿಂ ಮತ್ತು ಮುಸ್ಲಿಮೇತರ ಸಾಹಿತ್ಯ ರೂಪವಿರುವಂತೆ ಆತ್ಮಕಥಾ ಪ್ರಕಾರದಲ್ಲಿ ದಲಿತ ಮತ್ತು ದಲಿತೇತರ ಆತ್ಮಕತೆಗಳು ಎಂದು ವಿಭಾಗವಾಗಿಸಿಕೊಂಡಿವೆ. ಇದಕ್ಕೆ ಜನಾಂಗೀಯ ಚಿಂತನೆಗಳೇ ಕಾರಣವಾಗಿವೆ. ದಲಿತ ಆತ್ಮಕತೆಗಳಲ್ಲಿ ದಲಿತ ಸಂವೇದನೆ ಮಡುಗಟ್ಟಿದ್ದರೆ, ದಲಿತೇತರ ಆತ್ಮಕತೆಗಳು ಸಾಮಾಜಿಕ ನಿಂದನೆಗಳಿಂದ ದೂರವಿರುತ್ತವೆ. ಇದೇ ದಲಿತ ಮತ್ತು ದಲಿತೇತರ ಆತ್ಮಕತೆಗಳ ನಡುವಿನ ಅಂತರ.

ಆತ್ಮಕತೆ ಎಂದ ಕೂಡಲೇ ಅದು ಒಬ್ಬ ವ್ಯಕ್ತಿಯದೇ ವಿನಃ ಒಂದು ಸಮಾಜದ ಅಥವಾ ಸಮುದಾಯದ್ದು ಎಂದು ತಿಳಿಯುತ್ತಿರಲಿಲ್ಲ. ಆದರೆ ಎಪ್ಪತ್ತರ ದಶಕದ ನಂತರದಲ್ಲಿ ಕನ್ನಡ ಸಾಹಿತ್ಯದಲ್ಲಿ ದಲಿತ ಸಾಹಿತ್ಯ ಎಂಬ ಪಂಥ ಉದಯ-ವಾದಾಗಿನಿಂದ ಸಾಮಾಜಿಕ ಒಳಿತಿನ ಕಡೆಯ ಚಿಂತನೆಗಳು ಈ ಸಾಹಿತ್ಯದಲ್ಲಿ ಉದ್ಭವಗೊಂಡವು. ಆದ್ದರಿಂದ ದಲಿತ ಆತ್ಮಕತೆಗಳು ಕನ್ನಡ ಸಾಹಿತ್ಯದಲ್ಲಿ ಒಂದು ಸ್ಥಾನವನ್ನು ಗಿಟ್ಟಿಸಿಕೊಳ್ಳಲು ಸಾಧ್ಯವಾಯಿತು.

ಕನ್ನಡ ಸಾಹಿತ್ಯದಲ್ಲಿ ಆತ್ಮಕತೆಗಳು ಕಾಲವಾದ ಕಾಲದಿಂದಲೂ ಅವುಗಳು ತನ್ನ ಮಾನ್ಯತೆಯನ್ನು ಉಳಿಸಿಕೊಂಡು ಬಂದಿವೆ. ನವೋದಯ ಸಾಹಿತ್ಯ ಸಂದರ್ಭದಲ್ಲಿ ಬಂದಂತಹ ಆತ್ಮಕತೆಗಳಲ್ಲಿ ಕುವೆಂಪು ಅವರ "ನೆನಪಿನ ದೋಣಿಯಲ್ಲಿ", ಕಾರಂತರ "ಹುಚ್ಚು ಮನಸ್ಸಿನ ಹತ್ತುಮುಖಗಳು" ಇವುಗಳು ಇಳಿವಯಸ್ಸಿನಲ್ಲಿ ಬರೆದಂತಹ-ವುಗಳಾಗಿವೆ. ಜೊತೆಗೆ ಆ ಸಾಹಿತ್ಯ ಘಟ್ಟದಲ್ಲಿ ಪ್ರಮುಖ ಬರವಣಿಗೆಗಳೂ ಕೂಡ ಆಗಿವೆ.

ನವೋದಯ ಸಂದರ್ಭದಲ್ಲಿ "ಆತ್ಮಕತೆಗಳು ಒತ್ತಾಸೆಯ ಮೂಲ ವ್ಯಕ್ತಿ ನೆಲೆಯದ್ದೊ ಅಥವಾ ಸಮುದಾಯ ನೆಲೆಯದ್ದೋ ಎಂಬ ಪ್ರಶ್ನೆಯು ಎದುರಾಗುತ್ತದೆ. ಸಮುದಾಯದ ನೆಲೆಯದ್ದಾಗಿದ್ದರೆ ಅದು ಸಮುದಾಯದ ಅಪೇಕ್ಷೆಯೇ ಆಗಿರುತ್ತದೆ. ವ್ಯಕ್ತಿ ನೆಲೆಯದ್ದಾಗಿದ್ದರೆ ಅದು ವ್ಯಕ್ತಿಯ ಅಪೇಕ್ಷೆಯಾಗಿರುತ್ತದೆ. ಆದರೆ ವ್ಯಕ್ತಿಯ ಅಪೇಕ್ಷೆ ಎಂಬುದನ್ನು ಕೂಡ ಸಮಾಜವೇ ಸೃಷ್ಟಿಸುತ್ತದೆ. ಹಾಗಾಗಿ ತನ್ನ ಬಗ್ಗೆ ತಾನು ಹೇಳಿಕೊಳ್ಳಬೇಕೆಂಬ ಹಂಬಲವು ಒಂದು ಹಂತದಲ್ಲಿ ಮೂಲದ್ದು ಎಂದು ಕಾಣಿಸಿದರೂ ಮತ್ತೊಂದು ದೃಷ್ಟಿಯಲ್ಲಿ ಅದು ಸಮಾಜಮೂಲದ್ದು ಆಗಿರುತ್ತದೆ. ಅಥವಾ ಇವೆರಡೂ ಪರಸ್ಪರ ಒಂದನ್ನೊಂದು ಅವಲಂಬಿಸಿರುತ್ತವೆ"[೧]

ತಮ್ಮ ಆತ್ಮಕತೆಯ ಬಗ್ಗೆ ಹೇಳಿಕೊಂಡಿರುವ ಮಾತುಗಳನ್ನು ಇಲ್ಲಿ ಗಮನಿಸಬಹುದು. "ಆತ್ಮಕತೆ ಎಂದರೆ ಪೂರ್ತಿವಾಸ್ತವವಾಗಿ ನಡೆದುದರ ಕಥೆ ಎಂದು ಹೇಳಲಾಗದು ಎಂಬ ನಿಲುವನ್ನು ಶ್ರೀರಂಗರು ಹೇಳಿಕೊಂಡಿದ್ದಾರೆ".[೨]

"ಕಥೆಯಲ್ಲಿಯಂತೆ ಆತ್ಮಕತೆಯಲ್ಲಿಯೂ ಕಲ್ಪನೆಗೆ ಇಲ್ಲವೆ, ಅಪ್ರತ್ಯಕ್ಷ ಅನುಭವಕ್ಕೆ ಅವಕಾಶವಿದೆ. ತನ್ನ ಬಾಲ್ಯದ ಬಗ್ಗೆ ಬರೆಯುವ ಎಪ್ಪತ್ತರ ಸಮೀಪದ ವಯಸ್ಸಿನ ನನ್ನಂತಹ ಬರಹಗಾರನಿಗೆ ಬಾಲ್ಯದ ಪ್ರತ್ಯಕ್ಷ ಅನುಭವಕ್ಕಿಂತ ಅಸ್ಪಷ್ಟ ಸ್ಮರಣೆಗಳ ಆಧಾರವೇ ಹೆಚ್ಚಾಗಿರಬಹುದಾಗಿದೆ. ಎರಡರಲ್ಲಿ ಸತ್ಯದ ಇಲ್ಲವೇ ಪ್ರತ್ಯಕ್ಷದ ಅಂಶವೂ ಸಾಕಷ್ಟಿದೆ ಎನ್ನಬಹುದಲ್ಲ"[೩] ಎಂದು ಶ್ರೀರಂಗರು ಆತ್ಮಕತೆಯ ಉದ್ದೇಶವನ್ನು ಹೇಳುವಾಗ ಈ ಮಾತನ್ನು ಹೇಳಿಕೊಂಡಿದ್ದಾರೆ.

ಇನ್ನೊಬ್ಬರ ಬಗ್ಗೆ ಬರೆಯುವಾಗ ಪ್ರತಿಷ್ಠೆಯ ಬಗ್ಗೆ ಅಷ್ಟೊಂದು ಹೊಣೆಗಾರಿಕೆ ಎನಿಸದೆ ಕಟುಸತ್ಯವನ್ನು ಬರೆಯಬಲ್ಲವನು ತನ್ನ ಬಗ್ಗೆ ಬರೆಯುವಾಗ ಪ್ರತಿಷ್ಠೆಯನ್ನು ಕಾಯ್ದುಕೊಳ್ಳುವುದಕ್ಕೆ ಕೆಲವೊಮ್ಮೆ ಕಟುಸತ್ಯವನ್ನು ಬಚ್ಚಿಡಲೂ ಯತ್ನಿಸಬಹುದಲ್ಲ... ಆತ್ಮಕತೆಯನ್ನು ಬರೆಯುವಾಗ ಕಲ್ಪನಾ ಶಕ್ತಿಯನ್ನು ಪೂರ್ತಿಯಾಗಿ ಬದಿಗಿಟ್ಟಿದ್ದೇನೆ ಎಂದೂ ಹೇಳಲಾರ.[೪]

---

೧. ಆತ್ಮ ಕತೆಗಳಲ್ಲಿ ಕರ್ನಾಟಕದ ಕತೆ, ಬಿ.ಎಂ.ಪುಟ್ಟಯ್ಯ, ಪು. ೫.
೨. ಅದೇ, ಪು. ೬
೩. ಅದೇ, ಪು. ೬.
೪. ಅದೇ, ಪು. ೭.

ಶ್ರೀರಂಗರ ಮಾತಿನ ಹಿನ್ನೆಲೆಯಲ್ಲಿ ನವೋದಯ ಸಂದರ್ಭದ ಆತ್ಮಕತೆಗಳಲ್ಲಿ ವಾಸ್ತವತೆಯನ್ನು ಮುಚ್ಚಿ ಬರೆಯುತ್ತಿದ್ದರೆಂಬ ಕಲ್ಪನೆಯನ್ನು ಇವರ ಮಾತಿನಿಂದ ನಾವು ತಿಳಿಯಬಹುದಾಗಿದೆ.

ಪ್ರಗತಿಶೀಲ ಕಾಲಘಟ್ಟದಲ್ಲಿ ಬಂದ ಆತ್ಮಕತೆಗಳು ತಮ್ಮ ಸ್ವರೂಪವನ್ನು ಅದೇ ರೀತಿಯಲ್ಲಿ ಉಳಿಸಿಕೊಂಡು ಬಂದವು ಮತ್ತು ನವ್ಯ ಸಾಹಿತ್ಯ ಸಂದರ್ಭದಲ್ಲಿಯೂ ಸಹ ಈ ರೀತಿಯ ಆತ್ಮಕತೆಗಳು ಬಹಳ ಕಡಿಮೆ ಸಂಖ್ಯೆಯಲ್ಲಿ ಕಂಡುಬಂದಿವೆ ಮತ್ತು ಆ ವೇಳೆಯಲ್ಲಿ ವ್ಯಕ್ತಿಗತ ನೆಲೆಯಲ್ಲಿ ಯೋಚಿಸುವಂತಹ ಕಾಲಘಟ್ಟವಾಗಿತ್ತು. ಅವುಗಳು ಸಮಾಜದ ಪ್ರಶ್ನೆಯ ಗೊಡವೆಗೆ ಹೋಗಲಿಲ್ಲ. ಆದರೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅದರಲ್ಲೂ ದಲಿತ ಸಾಹಿತ್ಯ ಸಂದರ್ಭವಾದ ಎಂಭತ್ತರ ದಶಕದಲ್ಲಿ ಬಂದಂತಹ ಆತ್ಮಕತೆಗಳು ಬಹಳ ಮುಖ್ಯವಾದ ನೆಲೆಯನ್ನು ಗುರ್ತಿಸಿಕೊಂಡು ಬಂದವುಗಳಾಗಿವೆ. ದಲಿತ ಲೇಖಕರ ಆತ್ಮಕತೆಗಳಲ್ಲಿ ಜನಸಮುದಾಯದ ಪರಿಸರದ ಕತೆಯನ್ನು ತಮ್ಮಲ್ಲಿ ಸಮೀಕರಿಸಿಕೊಂಡು ಹೇಳಿರುವುದು ಗೋಚರಿಸುತ್ತದೆ.

ದಲಿತ ಆತ್ಮಕತೆಗಳಲ್ಲಿ ಪ್ರಥಮವಾಗಿ 'ಗೌರ್ಮೆಂಟ್ ಬ್ರಾಹ್ಮಣ' ಕೃತಿ ಬಂತು, ಅಲ್ಲಿ ವ್ಯಕ್ತವಾಗಿರುವ ಹಿಂಸೆ, ಬಡತನ ಶೋಷಣೆ, ಓದುಗರ ಮನವನ್ನು ಕೆರಳಿಸುತ್ತವೆ. ದಲಿತ ಆತ್ಮಕತೆಗಳು ಸಮಾಜ ಮುಖಿಯಾಗಿ ತನ್ನ ಜನಾಂಗದ ಬದುಕಿನ ಕಷ್ಟ ನೋವಿನ ಪ್ರತೀಕವಾಗಿ ರಚನೆಯಾಯಿತು. ಕನ್ನಡ ಸಾಹಿತ್ಯದ ಇತರ ಕಾಲಘಟ್ಟಗಳಿಗೆ ಪ್ರತಿಯಾಗಿ ದಲಿತ ಆತ್ಮಕತೆಗಳು ಜನ್ಮತಾಳಿರುವುದು ಕಂಡುಬರುತ್ತದೆ. ತಾವು ಹೇಳುವಂತಹ ವಿಷಯಗಳಲ್ಲಿ ಯಾವುದೇ ರೀತಿಯ ಹೆಚ್ಚು ಆವೇಶದ ಮಾತುಗಳನ್ನಾಡದೆ ಸೌಮ್ಯವಾದ, ಶಾಂತಿಯಿಂದ ತಮ್ಮ ಧೋರಣೆಯನ್ನು ವ್ಯಕ್ತ-ಪಡಿಸಿರುವುದರಿಂದ ಇತರ ಆತ್ಮಕತೆಗಳಿಗೆ ಭಿನ್ನವಾದ ನೆಲೆಯಲ್ಲಿ ನಿಲ್ಲಲು ಕಾರಣವಾಗಿದೆ.

ದಲಿತ ಆತ್ಮಕತೆಗಳಿಗೆ ಮೂಲ ಮರಾಠಿ ದಲಿತ ಆತ್ಮಕತೆಗಳು ಆದರೆ ಕನ್ನಡ ದಲಿತ ಸಾಹಿತ್ಯ ಸಂದರ್ಭದಲ್ಲಿ "ಗೌರ್ಮೆಂಟ್ ಬ್ರಾಹ್ಮಣ" ಮಾಲಗತ್ತಿ ಅವರ ಆತ್ಮಕತೆ ಮೊದಲನೆಯದಾಗಿದೆ. ಇದು ಅವರ ನಲವತ್ತರ ವಯಸ್ಸಿನಲ್ಲಿ ಬರೆದದ್ದು. ದಲಿತ ಆತ್ಮಕತೆಗಳು ಅವರ ಬಾಲ್ಯ, ಯೌವ್ವನದ ನೆಲೆಯಲ್ಲಿ ಬಂದು ನಿಲ್ಲುವುದು ಇತರ ಆತ್ಮಕತೆಗಳಿಗೆ ಭಿನ್ನವಾಗಿದೆ.

ಇದೇ ವೇಳೆಯಲ್ಲಿ ಅಂದರೆ ಹಲವು ವರ್ಷಗಳ ನಂತರ ಸಿದ್ಧಲಿಂಗಯ್ಯ ಅವರ 'ಊರುಕೇರಿ' ಮತ್ತು ತುಂಬಾಡಿ ರಾಮಯ್ಯ ಅವರ 'ಮಣೆಗಾರ' ಹಾಗೆಯೇ ಗೋವಿಂದರಾಜ್ ಅವರು 'ಮನವಿಲ್ಲದವರ ಮಧ್ಯೆ' ಕೃತಿಗಳು ಹಂತಹಂತವಾಗಿ ಬಂದವು.

ಈ ಮೇಲಿನ ಅಂಶಗಳಿಂದ ಹಿಂದಿನ ಆತ್ಮಕತೆಗಳಿಗಿಂತ ದಲಿತ ಆತ್ಮಕತೆಗಳು ಯಾವ ರೀತಿಯಲ್ಲಿ ಭಿನ್ನವೆಂದು ತೋರಲು ಈ ಅಂಶಗಳು ಸ್ವಲ್ಪಮಟ್ಟಿಗೆ ಸರಿಯೆಂದು ತಿಳಿಯಬಹುದಾಗಿದೆ. ಮುಪ್ಪಿನ ಸಂದರ್ಭದಲ್ಲಿ ಬಂದಂತಹ ಆತ್ಮಕತೆಗಳಿಗೂ ಮತ್ತು ಮಧ್ಯೆ ವಯಸ್ಸಿನಲ್ಲಿ ಬಂದಂತಹ ಆತ್ಮಕತೆಗಳಿಗೂ ಮತ್ತು ಮಧ್ಯೆ ವಯಸ್ಸಿನಲ್ಲಿ ಬಂದಂತಹ ಆತ್ಮಕತೆಗಳಿಗೂ ಅವುಗಳ ವ್ಯಾಪ್ತಿ, ಸ್ವರೂಪ, ಹೇಳುವ ವಿಷಯಗಳ ಹಿನ್ನೆಲೆಯಲ್ಲಿ ದಲಿತ ಆತ್ಮಕತೆಗಳ ಸ್ಥಾನ ಉನ್ನತವಾದ ನೆಲೆಯಲ್ಲಿ ನಿಲ್ಲಬಹುದು ಎನಿಸುತ್ತದೆ.

ಒಟ್ಟಾರೆ ದಲಿತ ಆತ್ಮಕತೆಗಳಲ್ಲಿ ಕೋಪ, ಆವೇಶ ಆವೇಗದ ಮನೋಭಾವನೆಗಳನ್ನು ಸೌಮ್ಯವಾಗಿ ನುಂಗಿ ನೊಣೆಯಲಾಗಿದೆ. ತಾವು ಅನುಭವಿಸಿದ ಸಾಮಾಜಿಕ ಕಳಂಕಗಳನ್ನು ಪ್ರಾತಿನಿಧಿಕ ಚಿತ್ರಣದೊಂದಿಗೆ ದಲಿತ ಲೇಖಕರು ಕಟ್ಟಿಕೊಟ್ಟಿರುತ್ತಾರೆ. ಆದ್ದರಿಂದ ಕನ್ನಡ ಸಾಹಿತ್ಯದಲ್ಲಿ ದಲಿತ ಆತ್ಮಕತೆಗಳಿಗೊಂದು ವಿಶೇಷವಾದ ಸ್ಥಾನ ಲಭಿಸಿದೆ, ಓದುಗರನ್ನು ಸಹೃದಯ, ಸಹಪಾಠಿಗಳನ್ನು ಹೊಂದಿವೆ. ಬದುಕಿನ ಒಂದೊಂದು ಚಿತ್ರಣದ ಎಳೆಗಳನ್ನು ಹಂದರವಾಗಿ ಈ ಆತ್ಮಕತೆಗಳಲ್ಲಿ ಹೆಣೆಯಲಾಗಿದೆ. ಆದ್ದರಿಂದಲೇ ಕನ್ನಡದಲ್ಲಿ ದಲಿತ ಆತ್ಮಕತೆಗಳು ಎಂದಕೂಡಲೇ ವಿಶೇಷವಾದೊಂದು ಮನಃಸ್ಥಿತಿ ಉಂಟಾಗುತ್ತದೆ.

****

# ಅಧ್ಯಾಯ ೫

## ವ್ಯಷ್ಠಿ ನೆಲೆಯಿಂದ ಸಮಷ್ಠಿ ನೆಲೆಗೆ ಆತ್ಮಕತೆಗಳ ಮಿಡಿತ

ಒಂದು ರಾಜ್ಯದ ಮುಖ್ಯಮಂತ್ರಿ ದುಡಿಯುವುದು ರಾಜ್ಯಕ್ಕಾಗಿ ಹಾಗೆಯೇ ಒಂದು ಜಿಲ್ಲೆಯ ಜಿಲ್ಲಾಧಿಕಾರಿ ದುಡಿಯುವುದು ಕೂಡ ಜಿಲ್ಲೆಯ ಹಿತಕ್ಕಾಗಿ, ಬೆಳವಣಿಗೆಗಾಗಿ. ಹಾಗೆಯೇ ಯಾವುದೇ ಒಂದು ಸಾಹಿತ್ಯ ಕೃತಿ ಕೂಡ. ಒಬ್ಬ ಲೇಖಕನಿಂದ, ಕವಿಯಿಂದ, ಮಹಾಕವಿಯಿಂದ ರಚಿಸಲ್ಪಟ್ಟ ಕಾವ್ಯ ಕೃತಿಗಳು ತಮ್ಮ ಸ್ವಂತಕ್ಕಾಗಿ ಅಲ್ಲ, ಆ ಸಮಾಜಕ್ಕೆ, ಆ ಜನಮುದಾಯಕ್ಕೆ ಸಹೃದಯರ ಓದಿಗಾಗಿಯೇ ಮಾತ್ರ, ಹಾಗೆಯೇ ಒಂದು ಆತ್ಮಕತೆಯ ಹಿಂದೆ ಒಬ್ಬ ವ್ಯಕ್ತಿ ಪಾತ್ರಧಾರನಾದರೆ, ನಟಿಸುವ ಮಂಟಪ ಸಮಾಜವಾಗಿರುತ್ತದೆ, ಸಮುದಾಯವಾಗಿರುತ್ತದೆ.

ದಲಿತೇತರ ಆತ್ಮಕತೆಗಳನ್ನು ಕೊಂಚ ದೂರ ಇರಿಸಿ ದಲಿತ ಆತ್ಮಕತೆಗಳನ್ನು ಶಕ್ತಿ ನೋಟದಿಂದ ನೋಡಿದಾಗ ಸಾಮುದಾಯಿಕ ಹಿನ್ನೆಲೆ ಗೋಚರಿಸುತ್ತದೆ. ಸಮಾಜದಲ್ಲಿನ ಬಡವರ, ದಲಿತರ ಪೂರ್ಣ ಚಿತ್ರಣ ಈ ದಲಿತ ಆತ್ಮಕತೆಗಳಲ್ಲಿ ಹೃದ್ಗೋಚರಿಸುತ್ತದೆ. ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ ಆತ್ಮಕತೆ ಮಾಲಗತ್ತಿಯರೊಬ್ಬರಿಗೆ ಸೀಮಿತವಾದುದಲ್ಲ ಅಥವಾ ಒಂದು ಹಳ್ಳಿಯ ಕಥೆಯಲ್ಲ, ಅದೊಂದು ಇಡೀ ಭಾರತದ ಕತೆ. ಒಂದು ರಾಷ್ಟ್ರದಲ್ಲಿನ ರಾಜ್ಯದಲ್ಲಿನ ದಲಿತರ ಶೋಷಣೆಯ ಅನುಭವದ ದಾಖಲೆ. ಸಿದ್ಧಲಿಂಗಯ್ಯನವರ ಊರುಕೇರಿ ಇಂಡಿಯಾದ ಬಡವರ, ಅಸ್ಪೃಶ್ಯರ ಶೋಷಣೆಯ ಸ್ಥಿತಿ ಇಪ್ಪತ್ತನೇ ಶತಮಾನದಲ್ಲಿಯೂ ಕೂಡ ಎತ್ತಾಗಿ ನೇಗಿಲೆಳೆದ ಸ್ಥಿತಿ ಈ ನೆಲದಲ್ಲಿ ಇದೇ ಎಂದಿದೆ..... ಅಂದು ದಲಿತರನ್ನು ಬಳಸಿಕೊಳ್ಳುತ್ತಿದ್ದ ರೀತಿಯನ್ನು ತೋರಿಸುತ್ತದೆ.

ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದ ದಲಿತರ ಸ್ಥಿತಿ ಅಂದರೆ ಕಡಿಮೆ ಹಣಕ್ಕೆ ಅಧಿಕ ಸಮಯ ದುಡಿಯುತ್ತಿರುವುದು, ಜೀತಕ್ಕೆ ದಲಿತರನ್ನು ನೇಮಿಸಿಕೊಂಡು ಬಾಡಿಗೆ ಎತ್ತಿನ ಹಾಗೆ ದುಡಿಸಿಕೊಳ್ಳುವುದು, ಚಳಿ, ಮಳೆ, ಬೇಸಿಗೆ, ಬಿಸಿಲು ಎನ್ನದೆ ದುಡಿಸಿಕೊಳ್ಳುತ್ತಿರುವುದು, ಮೈ ತುಂಬಾ ಹೊದಿಯಲು ಬಟ್ಟೆಯಿಲ್ಲದೆ ಕಾಡು ಮೃಗಗಳಂತೆ ಬದುಕುತ್ತಿರುವುದು ಮನೆಯ ಹೊಸ್ತಿಲನ್ನು ದಲಿತರು, ಅಸ್ಪೃಶ್ಯರು ದಾಟುವಂತಿಲ್ಲ. ಉನ್ನತ ಹುದ್ದೆಗಳನ್ನು ಅಲಂಕರಿಸುವಂತಿಲ್ಲ, ತನ್ನ ಜಾತಿಯವರಿಗೆ, ಧರ್ಮದವರಿಗೆ ಅವಕಾಶಗಳನ್ನು ನೀಡಿ ದಲಿತರಿಗೆ ಸಿಗದ ಹಾಗೆ ನೋಡಿಕೊಳ್ಳುವುದು.

ಹೀಗೆ ಸ್ವಜಾತಿ ಪ್ರತಿಷ್ಠೆಗಳನ್ನು ಅನುಸರಿಸಿ ದಲಿತ ಅನ್ಯಾಯಗಳು ಜರುಗುತ್ತಿರುವುದು, ಇವೆಲ್ಲಾ ಜಾತಿಯ ಹೆಸರಿನಲ್ಲಿನ ಸಾಮುದಾಯಿಕ ಕ್ರೂರತ್ವಗಳೇ ಆಗಿವೆ. ಹಳ್ಳಿಗಳಲ್ಲಿ ದಲಿತರ ಕೇರಿ, ದಲಿತೇತರರ ಕೇರಿ ಎಂದು ಪ್ರತಿಯೊಂದು ಹಳ್ಳಿಗಳಲ್ಲಿಯೂ ನಾವು ಕಾಣುತ್ತೇವೆ. ಮುಟ್ಟಿದರೆ ಮೈಲಿಗೆಯಾಗುತ್ತದೆಂದು ದಲಿತರನ್ನು ದೂರದಲ್ಲಿ ನಿಲ್ಲಿಸಿ ಮಾತನಾಡಿ ಸುವಂತಹ ಸ್ಥಿತಿ ಇಂದಿಗೂ ಕೂಡ ಕರ್ನಾಟಕದಲ್ಲಿ ನಾವು ನೋಡುತ್ತೇವೆ, ನೋಡುತ್ತಿದ್ದೇವೆ. ಆಧಾರದಲ್ಲಿಯೂ ಕೂಡ ಕಚ್ಚಾ ಆಹಾರ, ಪಕ್ಕಾ ಅಹಾರ ಒಂದೊಂದು ಜಾತಿಯ ಜನರಿಗೆ ಸೀಮಿತವಾಗಿರುವುದನ್ನು ನಾವು ಕಾಣುತ್ತೇವೆ. ಇವೆಲ್ಲವೂ ದಲಿತ ಆತ್ಮಕತೆಗಳಲ್ಲಿ ಮಡುಗಟ್ಟಿವೆ. ಇಂದಿಗೂ ಕೂಡ ಹಳ್ಳಿಗಳಲ್ಲಿ ದಲಿತರಿಗೆ ಹೊಟೇಲ್, ದೇವಸ್ಥಾನ, ಕಟಿಂಗ್ ಶಾಪ್‌ನಂತಹ ಸ್ಥಳಗಳಿಗೆ ಪ್ರವೇಶವನ್ನು ನಿಷೇಧಿಸಿದ್ದಾರೆ. ಇವೆಲ್ಲಾ ದಲಿತ ಆತ್ಮಕತೆಗಳಲ್ಲಿ ಒಂದು ಎಳೆಗಳಾಗಿವೆ. ಆದ್ದರಿಂದಲೇ ದಲಿತ ಕವಿಯೊಬ್ಬ ಅಥವಾ ಲೇಖಕನೊಬ್ಬ ಬರೆದಂತಹ ಆತ್ಮಕತೆ ಅದೊಂದು ಸಾಮುದಾಯಿಕ, ಸಮಷ್ಠಿ ನೆಲೆಯಲ್ಲಿ ರೂಪುಗೊಂಡಿರುತ್ತದೆ.

ಲೇಖಕನೊಬ್ಬನಿಂದ ಅನುಭವಿಸಿದ ನೋವು-ನಿಂದನೆಗಳು ಒಂದು ಸಾಮಾಜಿಕ ಸಮುದಾಯದ ನಿಂದನೆಯ ಪ್ರತೀಕಗಳೇ ಆಗಿರುತ್ತವೆ. ಬಾಲ್ಯದಿಂದ ವೃದ್ಧಾಪ್ಯದವರೆಗೆ ಅನುಭವಿಸಿದ ಒಡಲಾಳದಲ್ಲಿನ ನೋವುಗಳು ದಲಿತರ ಸಮಾಜದಲ್ಲಿನ ಚಿಕ್ಕ ಮಕ್ಕಳಿಂದ ಹಿಡಿದೂ ವೃದ್ಧ ವ್ಯಕ್ತಿಗಳವರೆಗೆ ಅನ್ವಯವಾಗಿರುತ್ತದೆ. ಸಾರ್ವಜನಿಕ ಕೊಳವೆ ಬಾವಿ, ಕೆರೆ ಕಟ್ಟೆಗಳಲ್ಲಿ ನೀರನ್ನೇ ದಲಿತ ವ್ಯಕ್ತಿಗಳು ಬಳಸಕೂಡದು ಎಂಬ ನಿಲುವು ಇಂದಿಗೂ ಕೂಡ ಹಲವು ಹಳ್ಳಿಗಳಲ್ಲಿ ನಾವು ನೋಡುತ್ತಿದ್ದೇವೆ. ಈ ಎಲ್ಲಾ ಅನುಭವಗಳನ್ನು ಹೊತ್ತುಕೊಂಡೆ ದಲಿತ ಆತ್ಮಕತೆಗಳು ರೂಪುಗೊಂಡಿವೆ. ದಲಿತ ಸವರ್ಣೀಯರ ಜಮೀನಿನಲ್ಲಿ ಮನೆಯಲ್ಲಿ ಕೆಲಸ ಮಾಡಬಹುದು, ದುಡಿಯಬಹುದು ಆದರೆ ಸವರ್ಣೀಯ ವ್ಯಕ್ತಿ ಹೇಗೆ ಇರಲಿ ಜಮೀನಿನಲ್ಲಿಹೋಗಿ ದುಡಿಯಕೂಡದು ಎಂಬ ನಿಲುವು ಇಂದಿಗೂ ಕೂಡ ಇದೆ.

ಒಟ್ಟಾರೆ ದಲಿತ ಆತ್ಮಕತೆಗಳು ಬರಹಗಾರನಿಗಷ್ಟೇ ಸೀಮಿತವಾಗಿರದೆ ಒಂದು ತಳ ಸಂಸ್ಕೃತಿಯ ಪ್ರಾತಿನಿಧಿಕ ಸ್ವರೂಪದ ವ್ಯಾಪಕತೆಯನ್ನು ಹೊಂದಿರುತ್ತವೆ, ಹೊಂದಿವೆ. ಹಾಗೂ ಸಾಮುದಾಯಿಕ ಸಂಕೇತಗಳನ್ನು ಪ್ರತಿನಿಧಿಸುತ್ತವೆ. ವ್ಯಷ್ಠಿ ನೆಲೆಯಿಂದ ಸಮಷ್ಠಿ ನೆಲೆಗೆ ದಲಿತ ಆತ್ಮಕತೆಗಳು ಸಿಡಿಯುತ್ತವೆ, ಮಿಡಿಯುತ್ತವೆ.

# ಅಧ್ಯಾಯ ೬

# ಎರಡು ಆತ್ಮಕತೆಗಳ ಅಂತರಾಳ ಮತ್ತು ವಿಮರ್ಶೆ

## ೧. 'ಊರುಕೇರಿ' ಭಾಗ- ೧

### ಲೇಖಕರ ಪರಿಚಯದೊಂದಿಗೆ

ಎಪತ್ತರ ದಶಕದಲ್ಲಿ ಕನ್ನಡ ಸಾಹಿತ್ಯ ಕಂಡಂತಹ ಅಪರೂಪದ ಕವಿ ಸಿದ್ದಲಿಂಗಯ್ಯ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕಿನ 'ಮಂಚನಬೆಲೆ'ಯಲ್ಲಿ ೧೯೫೪ರಲ್ಲಿ ಹುಟ್ಟಿದ ಸಿದ್ಧಲಿಂಗಯ್ಯನವರು ಹೊಸಗನ್ನಡ ಸಾಹಿತ್ಯದ ಪ್ರಮುಖ ಕವಿಗಳಲ್ಲಿ ಒಬ್ಬರು. 'ದಲಿತ ಕವಿ' ಎಂದೇ ಪ್ರಖ್ಯಾತರಾದ ಇವರು ದಲಿತ ಹೋರಾಟ ಹಾಗೂ ಸಾಮಾಜಿಕ ಸಮಾನತೆಗಾಗಿ ಕೆಲಸ ನಿರ್ವಹಿಸಿದ ವ್ಯಕ್ತಿಯಾಗಿದ್ದಾರೆ. ಸಿದ್ಧಲಿಂಗಯ್ಯನವರ ಸಾಹಿತ್ಯವು ಒಂದು ಪ್ರಮುಖ ಸಾಂಸ್ಕೃತಿಕ ದಾಖಲೆಯಾಗಿದೆ. ಅಲಕ್ಷಿತ ಸಮುದಾಯದ ಅನುಭವಗಳನ್ನು ಯಾವ ಮುಲಾಜಿಲ್ಲದೆ ಒಂದು ದಶಕದಲ್ಲಿ ಕಾವ್ಯವಾಗಿಸಿದ ದಲಿತ ಕವಿ ಸಿದ್ಧಲಿಂಗಯ್ಯ ಬಹುಕ್ಷೇತ್ರದಲ್ಲಿ ಪರಿಣಿತರಾಗಿದ್ದಾರೆ, ಇವರ ಪ್ರಥಮ ಕೃತಿ 'ಹೊಲೆಮಾದಿಗರ ಹಾಡು' ಸಾಂಸ್ಕೃತಿಕ ಜಗತ್ತಿನ ಬಹುದೊಡ್ಡ ದಾಖಲೆಯಾಗಿದೆ. ಜಡ್ಡುಗಟ್ಟಿದ ಭಾವನೆಗಳ ಹೊಸ ರಕ್ತ ಪುಷ್ಟಿಯನ್ನು ಪಡೆಯಿತು. ಶತಮಾನಗಳಿಂದ ತುಳಿತಕ್ಕೆ ಒಳಗಾಗಿದ್ದ ವರ್ಗದ ವೇದನೆ–ಸಂವೇದನೆಗಳು ವಿಶಿಷ್ಟ ರೀತಿಯಲ್ಲಿ ಅಭಿವ್ಯಕ್ತಿ ಪಡೆದು ಅ ವರ್ಗ ಆವರೆಗೆ ಅದುಮಿಟ್ಟಿದ್ದ ರೋಷ, ರೊಚ್ಚು, ವಿಷಾದಗಳೆಲ್ಲಾ ಕಾವ್ಯದುದ್ದಕ್ಕೂ ಹರಿದವು.

ಇವರು ಕಾಲೇಜು ದಿನಗಳಲ್ಲಿ ಶ್ರೇಷ್ಠ ದರ್ಜೆಯ ಚರ್ಚಾಪಟುವಾಗಿದ್ದರು. ಹಾಸ್ಯ ಲೇಪಿತವಾದ ಆದರೆ ಚುರುಕು ಮುಟ್ಟಿಸುವ ಪರಿಣಾಮಕಾರಿಯಾದ ಭಾಷಣ ಕಲೆಯನ್ನು ಕರಗತವಾಗಿಸಿಕೊಂಡಿದ್ದರು. ಸಂಶೋಧನಾ ಸಹಾಯಕರಾಗಿ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರ ಪ್ರವೇಶಿಸಿದ ಸಿದ್ಧಲಿಂಗಯ್ಯ ಅವರು ಪ್ರಾಧ್ಯಾಪಕರಾಗಿ, ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದರು.

ಸಿದ್ಧಲಿಂಗಯ್ಯ ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ, ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃರಾಗಿ ಮತ್ತು ಸತತವಾಗಿ ಎರಡು ಬಾರಿ ರಾಜ್ಯ ವಿಧಾನ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸಿ ದಲಿತರು ಮಹಿಳೆಯರ ಸಮಸ್ಯೆಗಳು, ಕನ್ನಡದ ಸಮಸ್ಯೆ

ಮತ್ತು ಕನ್ನಡಿಗರ ಬವಣೆಗಳನ್ನು ಆಡಳಿತ ಶಾಹಿ, ಅಧಿಕಾರ ಶಾಹಿಗಳಿಗೆ ತಮ್ಮ ಛಾಟಿ ಏಟಿನಂಥ ಮಾತುಗಳ ಮೂಲಕ ಮನವರಿಕೆ ಮಾಡಿಕೊಟ್ಟರು.

'ಹೊಲೆಮಾದಿಗರ ಹಾಡು' ಕೃತಿ ಆ ವರೆಗೂ ಇದ್ದ ಒಂದು ಶ್ರೇಣೀಕೃತ ಸಾಹಿತ್ಯ ಪಾಳೆಗಾರಿಕೆಯನ್ನು ಈ ಸಂಕಲನದಿಂದ ಪ್ರಥಮ ಬಾರಿಗೆ ಹೊಲೆ ಮಾದಿಗರಿಗೆ ಸಾಹಿತ್ಯದಲ್ಲಿ ಸ್ಥಾನ ದೊರೆಯುವಂತಾಯಿತು. ನಂತರದಲ್ಲಿ ಸಂಘಟನೆ ಚಳುವಳಿಗೆ ಚಾಲನೆಯಿಂದ ಈ ದಲಿತ ಸಾಹಿತ್ಯ ಎಡಪಂಥೀಯ ಧೋರಣೆಯ ಪರಂಪರೆಯ ಪ್ರಾತಿನಿಧಿಕ ಸಾಹಿತ್ಯವೆನಿಸಿದೆ. ಇದಲ್ಲದೆ 'ಸಾವಿರಾರು ನದಿಗಳು', 'ಕಪ್ಪು ಕಾಡಿನ ಹಾಡು', ಪ್ರಕಟಿಸಿದ ಸಿದ್ಧಲಿಂಗಯ್ಯ ನಿಧಾನವಾಗಿ ರಾಜಕೀಯ ವಲಯಕ್ಕೆ ಜಾರಿಕೊಂಡು ತಮ್ಮ ಗಟ್ಟಿ ಕೂಗನ್ನು ತಗ್ಗಿಸಿಕೊಂಡರು. ನಾಟಕ ಕ್ಷೇತ್ರದಲ್ಲಿ ಸಿದ್ಧಲಿಂಗಯ್ಯನವರ 'ಪಂಚಮ' 'ನೆಲಸಮ', 'ಏಕಲವ್ಯ' ಎಡಪಂಥೀಯ ಧೋರಣೆಯಿಂದ ಕೂಡಿದೆ. ಪರಂಪರೆಯನ್ನು ಅವಮಾನವನ್ನು ಎತ್ತಿ ಹೇಳುತ್ತವೆ. ವಿಚಾರ ವಿಮರ್ಶಕರಾಗಿಯೂ ಸಿದ್ಧಲಿಂಗಯ್ಯ 'ಅವತಾರಗಳು', 'ಹಕ್ಕಿನೋಟ', 'ರಸಗಳಿಗೆಗಳು' ಎಂಬ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರ ಪಿಎಚ್.ಡಿ ಗ್ರಂಥ "ಗ್ರಾಮದೇವತೆಗಳು" ಹೀಗೆ ಜಾನಪದ ಸಂಶೋಧನೆ, ವಿಚಾರ ವಿಮರ್ಶೆ, ರಾಜಕೀಯ ಹೀಗೆ ಹಲವು ಕ್ಷೇತ್ರಗಳಲ್ಲಿ ತಮ್ಮನ್ನು ಏಕಕಾಲಕ್ಕೆ ಹಂಚಿಕೊಂಡಿರುವ ಸಿದ್ಧಲಿಂಗಯ್ಯನವರು ಕನ್ನಡ ಬರಹಗಾರರಲ್ಲಿ ಒಬ್ಬರು. 'ಸದನದಲ್ಲಿ ಸಿದ್ಧಲಿಂಗಯ್ಯ' ಅವರನ್ನು ಕುರಿತು ಬಂದ ಇತ್ತೀಚಿನ ಕೃತಿ ಇವರ ಸಂಪಾದಕರು ದೊಡ್ಡ ಹುಲ್ಲೂರು ರುಕ್ಕೋಜಿಯವರು.

ಕನ್ನಡ ದಲಿತ ಸಾಹಿತ್ಯ ಸಂದರ್ಭದ ದೈತ್ಯ ಪ್ರತಿಭೆಯ ಒಂದು ಮುಖವಾಗಿ ಸಿದ್ಧಲಿಂಗಯ್ಯನವರು ಕಾಣಿಸಿಕೊಂಡಿದ್ದಾರೆ. ಅವರ 'ಊರುಕೇರಿ' ಭಾಗ-೧, ೨ನ್ನು ನನ್ನ ಪ್ರಬಂಧದ ವ್ಯಾಪ್ತಿಯ ಪರಿಧಿಯಲ್ಲಿ ವಿಶ್ಲೇಷಿಸಿದ್ದೇನೆ.

"ನಾವು ಬದುಕುತ್ತಿರುವ ಯುಗದ ಬಹುಮುಖ್ಯ ಧ್ಯಾನ ಬಡತನವನ್ನು ಕುರಿತದ್ದು ಅದಕ್ಕಾಗಿಯೇ ಇದು ಬಡತನ ಯುಗ, ಬಡವರ ಯುಗ, ಕ್ರಾಂತಿಕಾರ ಕತೆಯನ್ನು ಅನೇಕ ರಾಜಕೀಯ ಸಿದ್ಧಾಂತಗಳ ಮೂಲಕ ಈ ಯುಗ ಆರಾಧಿಸಿತು."[೧]

---

೧. ಬಡವರ ನಗುವಿನ ಶಕ್ತಿ: ಸಂ. ಎಚ್.ದಂಡಪ್ಪ, ಪು. ೨೬೧

ಇದಕ್ಕೆ 'ಊರುಕೇರಿ' ಭಾಗ ಒಂದರಲ್ಲಿ "ಐನೋರ ಹೊಲದಲ್ಲಿ ಇಬ್ಬರು ಮನುಷ್ಯರ ಮೇಲೆ ನೊಗ ಹೂಡಿ ಇನ್ನಿಬ್ಬರು ಹೊಲ ಉಳುತ್ತಿದ್ದರು. ನೊಗ ಹೊತ್ತ ಆ ಇಬ್ಬರು ಮನುಷ್ಯರು ಎತ್ತುಗಳಂತೆ ಮುಂದೆ ಹೋಗುತ್ತಿದ್ದರು. ಇನ್ನೊಬ್ಬ ಹಿಂದಿನಿಂದ ಚಾಟಿಯ ತಿರುಗಿಸುತ್ತಾ ಉಳುಮೆ ಮಾಡುತ್ತಿದ್ದ. . . . . ಗದ್ದೆಯಲ್ಲಿ ಎತ್ತಾಗಿ ದುಡಿದ ನಮ್ಮಪ್ಪ ಸಂಜೆ ಮನೆಗೆ ಬಂದಾಗ ಅವ್ವ ಅವನ ಭುಜಕ್ಕೆ ಎಣ್ಣೆ ಕಾಯಿಸಿ ಹಚ್ಚುತ್ತಿದ್ದರು."[೧] ಭಾರತವು ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಒಂದು ಜಾತ್ಯಾತೀತ ರಾಷ್ಟ್ರ, ವಿವಿಧತೆಯಲ್ಲಿ ಏಕತೆ ಎಂದೆಲ್ಲಾ ತನ್ನ ದೇಶದಲ್ಲಿನ ಹುಳುಕನ್ನು ಮುಚ್ಚಿಕೊಂಡು ಬೊಂಬಡವನ್ನು ಹೊಡೆದುಕೊಳ್ಳುತ್ತದೆ. ಇಡೀ ದೇಶವೇ ನಾಚಿ ನೀರಾಗುವಂತಹ ರೋಗಗಳನ್ನು ಅಂಟಿಕೊಂಡಿದೆ. ಅವೇ ಸಾಮಾಜಿಕ ವರ್ಗ ವ್ಯವಸ್ಥೆ, ಮತ್ತು ಜಾತೀಯತೆ ಇಲ್ಲಿ ಬಡತನದ ಬೇಗುದಿ ಗೋಚರಿಸುತ್ತದೆ. ಕ್ರೂರ ಪ್ರಾಣಿಗಳಿಗಿಂತಲೂ ಕಾಡು ಮೃಗಗಳಿಗಿಂತಲೂ ಕೀಳಾಗಿ ಮನುಷ್ಯ-ಮನುಷ್ಯನನ್ನು ನೋಡಿಕೊಳ್ಳುತ್ತಿರುವ ಸಮುದಾಯದ ದುಷ್ಟ ಅರಿವೊಂದು ಇಲ್ಲಿ ಪ್ರತಿಫಲಿತಗೊಂಡಿದೆ. ಅಂದರೆ ಈ ಅನುಭವಗಳನ್ನು ಕಂಡ ಮನುಷ್ಯನ ಸ್ಥಿತಿಯನ್ನು ಗಮನಿಸಿದರೆ ಈ ಯುಗದಲ್ಲಿ ಮಾನವ ಅನ್ನಕ್ಕಾಗಿ ಮಾತ್ರ ಬದುಕುವ ಮಾನವ ಇನ್ನು ಹುಟ್ಟಿಲ್ಲ ಎಂಬ ಮಾತು ಸೃಷ್ಟಿಯಾಗುತ್ತದೆ. ಅಂದಿನ ಸಾಮಾಜಿಕ ಸ್ಥಿತಿಯಲ್ಲಿ ದಲಿತರು ಒಂದು ದುಡಿಯುವ ವರ್ಗಕ್ಕೆ ಸೇರಿದ್ದರು. ಆದ್ದರಿಂದ ತಮ್ಮ ಬದುಕನ್ನು ಸಾಗಿಸಲು ಈ ರೀತಿಯ ಹಿಂಸೆಯ ನೋವನ್ನು ಅನುಭವಿಸಿ ಜೀವನ ಸಾಗಿಸುವ ಪರಿಸ್ಥಿತಿಯಿತ್ತು.

"ಒಡೆಯರ ಮನೆಗೆ ಹೋಗಿ ಅಪ್ಪ, ಅವ್ವ, ನಾನು ಅವರ ಬಾಗಿಲ ಮುಂದೆ ನಿಂತಾಗ ಅವರು ಮನೆಯಲ್ಲಿ ಉಳಿದಿದ್ದ ಚಿತ್ರಾನ್ನ, ಪೂರಿ ಇತ್ಯಾದಿಗಳನ್ನು ಕೊಡುತ್ತಿದ್ದರು. ಈ ತಿಂಡಿಗಳನ್ನು ನಾನು ಎಂದೂ ತಿಂದಿರಲಿಲ್ಲ."[೨] ದಲಿತ ಸಮುದಾಯದ ಜನಕ್ಕೆ ಒಂದು ಕಾಲದಲ್ಲಿ ಎಂಥ ಸ್ಥಿತಿಯಿತ್ತು ಎಂಬುದು ಇದರಿಂದ ಅರಿವಿಗೆ ಬರುತ್ತದೆ. 'ಅನ್ನಸಂಕಟ' ಎಂಬುದು ಯಾವುದೇ ಜೀವಿಯನ್ನು ಬಿಟ್ಟಿದ್ದಲ್ಲ. ಮಾನವನೂ ಸಹ ಇದರೊಳಗೆ ಸೇರುತ್ತಾನೆ. ಅದೇ ರಿತಿಯಲ್ಲಿ ದಲಿತ ಜನರು ಒಂದು ಹೊತ್ತಿನ ಊಟಕ್ಕೆ ಯಾವ ರೀತಿ ಪರಿತಪಿಸುತ್ತಿದ್ದರು ಎಂಬುದು ವೇದ್ಯವಾಗುತ್ತದೆ. ಶ್ರೀಮಂತ ಶ್ರೀಮಂತನಾಗಿಯೇ ಬೆಳೆಯುವ, ಬಡವ ಬಡವನಾಗಿಯೇ ಉಳಿಯುವ

---

೧. ಊರುಕೇರಿ, ಪು. ೯
೨. ಅದೇ, ಪು. ೧೦

ವರ್ಗವ್ಯವಸ್ಥೆಯ ಅನ್ನ ಸಂಕಟಕ್ಕೆ ಪ್ರಮುಖ ಕಾರಣ. ದುಡಿಯುವವರೇ ಇಲ್ಲದೇ ಸಾವಿರಾರು ಎಕರೆ ಜಮೀನನ್ನು ಶ್ರೀಮಂತರು, ಸವರ್ಣೀಯರು ಹೊಂದಿದ್ದರೆ, ದುಡಿಯಲು ಸಿದ್ಧರಿರುವ ಜನತೆಗೆ ಅರ್ಥಾತ್ ದಲಿತರಿಗೆ ಭೂಮಿಯೇ ಇಲ್ಲದಿರುವುದು ಈ ಪರಿಸ್ಥಿತಿಗೆ ಕಾರಣವಾಗಿದೆ.

"ಸಾವಿನ ಭಯದಿಂದ ಬಡವರು ಹಬ್ಬ ಮಾಡಿದರು. ಶ್ರೀಮಂತರೂ ಅನ್ನ ಸಂತರ್ಪಣೆ ಮಾಡಿದರು. ಇದರ ಪ್ರಯೋಜನವನ್ನು ನಮ್ಮ ಕೇರಿಯ ಜನ ಚನ್ನಾಗಿಯೇ ಪಡೆದರು." [೧]

ಇಲ್ಲಿ ಸೌಮ್ಯವಾಗಿ ಹಸಿವಿನ ಸಮಸ್ಯೆಯನ್ನು ಎತ್ತಿ ತೋರಿಸಲು ಈ ವಾಕ್ಯ ರೂಪಿತವಾಗಿರುವಂತೆ ಕಂಡುಬರುತ್ತದೆ. ಅಂದರೆ ಶ್ರೀಮಂತರು ತಮ್ಮಲ್ಲಿ ಇದ್ದೂ ಅದನ್ನು ಬಡವರಿಗೆ ಕೊಡದೆ ತಾವೇ ಅನುಭವಿಸುತ್ತಿರುವ ವಾತಾವರಣದಿಂದ ಸಾವಿನ ಭಯ ಹುಟ್ಟಿ ನಾವೂ ಸಾಯುತ್ತೇವೆಂದು ಹೆದರಿ, ತಮ್ಮ ದಾನ ಧರ್ಮಗಳಿಂದ ಉಳಿಯುತ್ತೇವೆಂಬ ನಂಬಿಕೆಯ ಮೇಲೆ ಅನ್ನ ಸಂತರ್ಪಣೆಯನ್ನು ಕೈಗೊಳ್ಳುತ್ತಾರೆ. ಆದರೆ ದಲಿತರಗೆ ಅಂದು ಸಾವಿನ ಚಿಂತೆ ಇರಲಿಲ್ಲ. ತಮ್ಮ ಹಸಿವಿನ ಹಾಹಾಕಾರವನ್ನು ನೀಗಿಸಿಕೊಳ್ಳುವ ಉದ್ದೇಶವಿತ್ತೇ ಹೊರತು ಸಾವಿನ ಬಗ್ಗೆ ಚಿಂತೆ ಇರಲಿಲ್ಲ. ಸಾವು ಬಂದರೆ ಬರಲಿ ಅವರಿಗೆ ಅನ್ನ ಮುಖ್ಯವಾಗಿತ್ತು. ಈ ಹಸಿವಿನಲ್ಲಿ ಶ್ರೀಮಂತ ಬಡವ ಎಂಬ ತಾರತಮ್ಯವನ್ನು ನಾವು ಕಾಣಲು ಬರುವುದಿಲ್ಲ. ಇದು ಎಲ್ಲಾ ಜೀವಿಗಳಿಗೆ ಒಂದೇ ಎಂಬ ಪ್ರಕೃತಿಯ ಸೃಷ್ಟಿಯ ಮೂಲ ನೆಲೆಯಿಂದಲೇ ಬಂದಿರುವಂಥದ್ದು.

ಈ ಬಡತನ ಮತ್ತು ಹಸಿವುಗಳನ್ನು ತಮ್ಮ ಜೀವನದಲ್ಲಿ ಯಾವುದೇ ಎತ್ತರದ ಧನಿಯಲ್ಲಿ ಪ್ರಕಟಸಿದೆ. ಕೃತಿ ಇದನ್ನೆ ಗೆಲ್ಲುವ ಸಂದರ್ಭವೂ ಸಹ ಬರುತ್ತದೆ. ಆರ್ಥಿಕ ಸ್ಥಿತಿಯು ದಲಿತ ಸಮೂಹದ ಸಮಸ್ಯೆಯಾಗಿ ಅಂದಿನ ಕಾಲದಿಂದಲೂ ಇಂದಿನ ಕಾಲದವರೆಗೂ ಕಂಡುಬರುವ ಒಂದು ಮುಖ್ಯ ಅಂಶವಾಗಿದೆ. ಇಲ್ಲಿ ಐನೋರ ಹೊಲಕ್ಕೆ ಹೋಗಿ ದುಡಿಯುವುದು ತಮ್ಮ ಸಂಸಾರ ಸಾಗಿಸಲು ಶ್ರೀಮಂತರಿಂದ ಹಣ ಪಡೆದು ಜೀವನ ನಿರ್ವಹಿಸುವ ಪರಿಸ್ಥಿತಿ ಇತ್ತು."

---

೧. ಊರುಕೇರಿ, ಪು. ೧೩

"ಇದ್ದ ಚೂರು ಹೊಲದಲ್ಲಿ ಬೆಳದಿದ್ದು ತಂದೆಯ ಮೇಲಿದ್ದ ಸಾಲದ ಬಡ್ಡಿಗೆ ಸಾಗುತ್ತಿರಲಿಲ್ಲ. ಕೆಲವು ದಿನ ನನ್ನ ತಾಯಿ ಸಾವನದುರ್ಗಕ್ಕೆ ಕಾಡಿನಲ್ಲಿ ಸೌದೆ ತರಲು ಹೋಗುತ್ತಿದ್ದಳು. ಸಂತೆಯಲ್ಲಿ ಈ ಸೌದೆ ಹೊರೆಯನ್ನು ಮಾರುತ್ತಿದ್ದಳು."[೧] ಬಡತನದಲ್ಲಿ ಬೇಯುತ್ತಿದ್ದ ಮನೆಮಂದಿಯೆಲ್ಲ ದುಡಿದರೂ ಕೂಡ ಬಡತನ ಕಿಂಚಿತ್ತೂ ಕ್ಷೀಣಗೊಳ್ಳುತ್ತಿರಲಿಲ್ಲ. ಬಡತನದಿಂದ ಕುಟುಂಬಗಳು, ತಾವು ಹೋಗಿ ಶ್ರೀಮಂತರ ಮನೆಯಲ್ಲಿ ಜೀತಕ್ಕೆ ಇದ್ದೂ ದುಡಿದರೂ ಅವರ ಶ್ರಮವೆಲ್ಲ ತಾವು ಪಡೆದ ಹಣಕ್ಕೆ ಬಡ್ಡಿಯಾಗಿ ತೆರುವ ಪ್ರಸಂಗ ಬರುತ್ತಿತ್ತು. ತಮ್ಮ ಜೀವಮಾನವೆಲ್ಲ ಶ್ರೀಮಂತರ ಮನೆಯಲ್ಲಿ ದುಡಿದು ಸಾಲ ತೀರಿಸಬೇಕಾದಂತಹ ಪರಿಸ್ಥಿತಿ ಅಂದಿನ ದಲಿತ ಜನಾಂಗಕ್ಕೆ ಇದ್ದ ಸ್ಥಿತಿಯನ್ನು ಅನಾವರಣ ಮಾಡುತ್ತದೆ.

"ಮಳೆ ಬರಲೆಂದು ಅಲ್ಲಲ್ಲಿ ಪರ ಮಾಡತೊಡಗಿದರು. ಪರಕ್ಕೆ ಹೋದರೆ ಹೊಲೆಯರನ್ನು ಒಂದು ಮೂಲೆಯಲ್ಲಿ ಕೂರಿಸುತ್ತಿದ್ದರು. ಮೇಲುಜಾತಿಯ ಪಂಕ್ತಿಗಳ ಊಟ ಆದ ಮೇಲೆ ನಮ್ಮ ಕಡೆ ಗಮನ ಹರಿಯುತ್ತಿತ್ತು."[೨] ಹೊಲೆಯನೆಂಬ ಒಂದೇ ಜಾತಿಕಾರಣಕ್ಕೆ ಇವರದು ಕೆಳಸ್ತರದ ಬದುಕಾಗಿದೆ. ದಿನವಿಡೀ ಮಾನಸಿಕ ಯಾತನೆಯನ್ನು ದಲಿತರು ಅನುಭವಿಸುತ್ತಿದ್ದಾರೆ. ಇಷ್ಟೇ ಅಲ್ಲ ಸವರ್ಣೀಯರು ತಿಂದುಂಡು ಉಳಿದಿದ್ದನ್ನು ದಲಿತರು ಕೈಯೊಡ್ಡಿ ತಿನ್ನಬೇಕಿದ್ದ ಸಂದರ್ಭ ಈ ದೇಶದ ಅನರ್ಥ ಸಂಸ್ಕೃತಿಯ ಪ್ರತೀಕ. ಹೊಟೇಲ್‌ನವರು ಇತರರಿಗಿಂತ ದೂರದಲ್ಲಿ ನಮ್ಮಿಬ್ಬರನ್ನು ಕೂರಿಸುತ್ತಿದ್ದರು ಎನ್ನುವಲ್ಲಿ ತಳ ಸಂಸ್ಕೃತಿಯ ಅನಿಷ್ಟ ಬದುಕೊಂದನ್ನು ಈ ಸಮಾಜ ಪ್ರತಿನಿಧಿಸುತ್ತದೆ.

"ಮಂಟೇಸ್ವಾಮಿ ನಮ್ಮ ಮನೆಯ ದೇವರು ನಾವೆಲ್ಲ ಆ ದೇವರ ಒಕ್ಕಲು ಈ ಗುರುಗಳು ಬಂದರೆ ಸಾಕ್ಷಾತ್ ಮಂಟೇಸ್ವಾಮಿಯೇ ಬಂದಂತೆ..... ಆದರೆ ಈ ಗುರುಗಳು ಸವರ್ಣೀಯರು ಆದ್ದರಿಂದಲೋ ಏನೋ ಹೊಲೆಯರ ಕೇರಿಗೆ ಹೆಜ್ಜೆ ಇಡಲಿಲ್ಲ."[೩] ಆ ದೇವರು ಮಾತ್ರ ಮನದೇವರು ಆದರೆ ಪೂಜಾರಿ ಮಾತ್ರ ಸವರ್ಣೀಯ. ವ್ಯಕ್ತಿ– ದೇವರು ದಯಾಮಯಿಯೇ ಆಗಿದ್ದರೆ ಅವನ್ಯಾಕೆ ದಲಿತರ ಮನೆಗೆ ಬರುತ್ತಿರಲಿಲ್ಲ ಎಂಬ ಖಂಡನಾರ್ಹವಾದ ಇಂಗಿತವನ್ನು ಸಿದ್ಧಲಿಂಗಯ್ಯನವರು

---

೧. ಊರುಕೇರಿ, ಪು. ೧೩
೨. ಬಡವರ ನಗುವಿನ ಶಕ್ತಿ, ಸಂ.ಎಚ್.ದಂಡಪ್ಪ, ಪು. ೩೬೪
೩. ಊರುಕೇರಿ, ಪು. ೯

ಹೇಳುತ್ತಾರೆ. ಜೊತೆಗೆ ಇಂದಿಗೂ ಕೂಡ ಜಾತಿಯಾಧಾರಿತ ನೆಲೆಯಲ್ಲಿ ಹಳ್ಳಿಗಳಲ್ಲಿ ಹರಿದು ಹಂಚಿದ ಬೀದಿಗಳಿವೆ. ಸವರ್ಣೀಯರು ದಲಿತರ ಬೀದಿಗೆ ಹೋಗುವುದಿಲ್ಲ, ಏಕೆಂದರೆ ಮೈಲಿಗೆಯಂತೆ. ಅಂತೆಯೇ ಈ ನೆಲದ ವ್ಯಕ್ತಿಯಷ್ಟೇ ಅಲ್ಲ, ಸಂಸ್ಕೃತಿಯಷ್ಟೇ ಅಲ್ಲ, ತಿರುಗಾಡುವ ರಸ್ತೆಯೂ ಕೂಡ ಕಲ್ಲು, ಮಣ್ಣು, ಕೂಡ ದಲಿತರ ವಿರೋಧವಾಗಿಯೇ ಇವೆಯೇನೋ ಎಂದು ಭಾಸವಾಗುತ್ತದೆ.

"ಈ ರಸ್ತೆ ಊರು ಮತ್ತು ಹೊಲಗೇರಿಯನ್ನು ವಿಭಾಗಿಸುವ ಗೆರೆ' ಒಂದು ದಿನ ಬೀದಿಯಲ್ಲಿ ನಾನು ಜೋರಾಗಿ ಓಡುತ್ತಿದ್ದೆ ಎದುರಿಗೆ ಬರುತ್ತಿದ್ದವರ ಬಟ್ಟೆಗೆ ನನ್ನ ಮೈ ಸೋಂಕಿತು. ಆ ವ್ಯಕ್ತಿ ಕೋಪಗೊಂಡು ನಿಂತುಬಿಟ್ಟ. ಆ ವ್ಯಕ್ತಿಯನ್ನು ಪರಿ-ಪರಿಯಾಗಿ ಕ್ಷಮೆ ಕೇಳಿದ ಮೇಲೆ ಆತ ಹೊರಟು ಹೋದ."[೧] ದಲಿತನೊಬ್ಬ ಸವರ್ಣೀಯನ ಬಟ್ಟೆ ಮುಟ್ಟಿದ್ದು ಕೂಡ ಈ ದೇಶದಲ್ಲಿ ಅಪವಾದ. ಈ ನೆಲದ ದಲಿತರು ಆಶ್ಚರ್ಯ, ಆತಂಕದಿಂದ ಯೋಚಿಸಬೇಕಾದಾಗ ಅಗತ್ಯತೆ ಇದೆ.

ಕಿಲಾಡಿ ಮಾವನೊಬ್ಬನ ಪ್ರಸಂಗವನ್ನು ಸಿದ್ಧಲಿಂಗಯ್ಯ ನಗುವಾಗಿ ಕಟ್ಟಿಕೊಡುತ್ತಾರೆ. ಪಕ್ಕದ ಊರಿನಿಂದ ತಪ್ಪಿಸಿಕೊಂಡು ಬಂದಂತಹ ಎಮ್ಮೆಯನ್ನು ಅಂದು ರಾತ್ರೋ-ರಾತ್ರಿ ಅದನ್ನು ಕೊಂದು ಪಾಲು ಮಾಡಿಕೊಂಡು ತಿಂದರು. ಆದರೆ ಮಾರನೇ ದಿನ ಎಮ್ಮೆಯ ಒಡೆಯ ಹುಡುಕುತ್ತಾ ಬಂದು ಈ ಕಡೆ ಏನಾರ ನಮ್ಮ ಎಮ್ಮೆ ಬಂತಾ! ಎಂದು ವಿಚಾರಿಸಿದ. ರಾತ್ರಿ ನಡೆದಿರುವುದು ನೆನಪಾಗಿ ಈತ ಬಂದ ಕಡೆ ಹೋದರೆ ಗತಿಯೇನು? ಎಂದು ದಿಗಿಲಾಯಿತು ಕೂಡಲೇ ಅವನ ಜಾಣತನ ಕೆಲಸ ಮಾಡತೊಡಗಿತು.

"ನೀವು ಈ ಟೇಮಿನಲ್ಲಿ ಈ ಊರಿಗೆ ಬರಲೇಬಾರದಿತ್ತು. "ಎಂದು ಬಂದವನು ಗಾಬರಿಯಾಗಿ 'ಯಾಕೆ ಈ ಊರೇಲಿ ಅಂತದೇನಾಗದೆ" ಎಂದು ಕೇಳಿದ ಮಾವ "ಅಯ್ಯೋ ಇಲ್ಲಿ ಎಲ್ಲರಿಗೂ ವಾಂತಿ, ಭೇದಿ, ಈಗಾಗಲೇ ಮೂರು ನಾಲ್ಕು ಜನ ಸತ್ತೋದರು ಪಾಪ ನಿಮಗೂ ಅಂಟಿಕೊಂಡಾತು ಅಂತ ಹೇಳಿದೆ." ಎಂದ, ಈ ಮಾತು ಕೇಳಿದ್ದೆ ತಡ ಎಮ್ಮೆಯವನು ಬಿದ್ದಂಬೀಳ ಓಡತೊಡಗಿದ"[೨] ಈ ಸ್ಥಿತಿ ಹಾಸ್ಯದ, ಜೋಕಿನ, ಸಾಹಸದ ಕ್ರಮವೂ ಅಲ್ಲ, ಇದು ಹಸಿವಿನ ಪ್ರತಿನಿಧಿತ್ವ ಆಗಿದೆ. ಹೊಟ್ಟೆ

೧. ಊರುಕೇರಿ, ಪು. ೨೧
೨. ಅದೇ, ಪು. ೧೭

ಪಾಡಿನ ದಲಿತರ ವೇದನೆಯಾಗಿದೆ. ಕದ್ದು ತಿನ್ನುವ ಪರಿಪಾಠದ ನಿರ್ಗತಿಕತೆಯನ್ನು ತೋರುತ್ತದೆ.

ತಮ್ಮ ಆತ್ಮಕತೆ ಭಾಗ-೧ನ್ನು ಬಹುಪಾಲು ಸಿದ್ಧಲಿಂಗಯ್ಯನವರು ಹಾಸ್ಟೆಲ್ ಬದುಕಿನೊಂದಿಗೆ ಹೆಣೆದಿದ್ದರೆ ಶ್ರೀರಾಮಪುರದ ದಲಿತ ವಿದ್ಯಾರ್ಥಿನಿಲಯದಲ್ಲಿ ಇವರ ತಾಯಿ ಸೇವಕಿಯಾಗಿ ಕೆಲಸ ಮಾಡುತ್ತಿದ್ದರು. ಅದರಲ್ಲಿ " ವಿದ್ಯಾರ್ಥಿಗಳಿಗೆ ಊಟ ಬಡಿಸಿಯಾದ ಮೇಲೆ ಅಲ್ಲಿಯ ಕೆಲಸಗಾರರಿಗೂ ಊಟಕೊಡುತ್ತಿದ್ದರು. ಅವರು ಕೊಡುತ್ತಿದ್ದ ಮುದ್ದೆ ಸಾರನ್ನು ನನ್ನ ತಾಯಿ ಮಧ್ಯಾಹ್ನ - ರಾತ್ರಿ ಮನೆಗೆ ತರುತ್ತಿದ್ದಳು."[೧] ನನ್ನ ತಂಗಿ ಊಟದೊಂದಿಗೆ ಮನೆಗೆ ಬರುತ್ತಿದ್ದಳು. ಯಾವುದಾದರೂ ಅಂಗಡಿಯಲ್ಲಿ ಉಪ್ಪು ಪಡೆದು ಮಧ್ಯಾಹ್ನ ತಿನ್ನಬಹುದೆಂದು ನಾನು ತಂಗಿಯಿಂದ ಒಂದು ರಾಗಿ ಮುದ್ದೆಯನ್ನು ಈಸಿಕೊಂಡು ಬ್ಯಾಗಿನಲ್ಲಿ ಹಾಕಿಕೊಂಡು ಶಾಲೆಗೆ ಹೊರಟೆ! ನೋಡಿ ಇದು ಈ ದೇಶದ ಸ್ಥಿತಿ ಮುದ್ದೆ ಹಾಕಿಕೊಳ್ಳಲು ಒಂದು ಬಾಕ್ಸ್‌ಗಾದರೂ ಯೋಗ್ಯತೆ ಇಲ್ಲದ ಜಂಜಾಟದ ಪರಿಸ್ಥಿತಿಯನ್ನು ಈ ದೇಶ ನೋಡಿ ನೋಡಿ ಕೇಳಿ ನಾಚಬೇಕು. ಯಾರೋ ನೀಡಿದ ತುತ್ತು ಮುದ್ದೆಯನ್ನು ಅತ್ಯಂತ ಜಾಗರೂಕತೆಯಿಂದ ಬ್ಯಾಗಿನಲ್ಲಿಟ್ಟುಕೊಂಡು ಎಷ್ಟೊತ್ತಿಗೆ ತರಗತಿ ಬಿಡುತ್ತಾರೆಂಬ ಆಸೆಯ ಮಿಡಿತ ಎಂತವರನ್ನೂ ಕೂಡ ಕಣ್ಣು ಕರಗಿಸದೇ ಇರದು. ಹಾಸ್ಟೆಲ್‌ನಲ್ಲಿ ತನ್ನ ತಾಯಿ ತರುವ ಅನ್ನಕ್ಕಾಗಿ ಕಾಯುತ್ತಿರುತ್ತಾರೆ.

ವಸತಿ ನಿಲಯವೊಂದರ ವಿದ್ಯಾರ್ಥಿಗಳ ಗೋಳಿನ ಕತೆಯನ್ನು ಈ ಆತ್ಮಕತೆಯಲ್ಲಿ ಸಿದ್ಧಲಿಂಗಯ್ಯನವರು ನೆಯ್ದಿದ್ದಾರೆ. "ವಿದ್ಯಾರ್ಥಿಗಳು ಬೆಳಗಿನ ಜಾವ ನಾಲ್ಕು ಘಂಟೆಗೆ ಎದ್ದು ತಣ್ಣೀರು ಸ್ನಾನ ಮಾಡುತ್ತಿದ್ದರು. ದೊಡ್ಡದಾದ ಸ್ನಾನದ ತೊಟ್ಟಿಗೆ ತಮ್ಮ ಊಟದ ತಟ್ಟೆಗಳಿಂದ ನೀರನ್ನು ಮೊಗೆದು ಮೈಗೆ ಹುಯ್ದುಕೊಳ್ಳುವುದು ಸ್ನಾನ ಮೂಡುವ ರೀತಿ"[೨] ಶ್ರೀಮಂತವರ್ಗದ ಮಕ್ಕಳು ಅಷ್ಟಾಗಿ ವಿದ್ಯಾರ್ಥಿನಿಲಯಕ್ಕೆ ಸೇರುವುದಿಲ್ಲ. ಬಡವರ, ದಲಿತರ ಮಕ್ಕಳು ಮಾತ್ರ ಹಾಸ್ಟೆಲ್‌ನಲ್ಲಿ ವಾಸಿಸುತ್ತಾರೆ. ಅವರು ಸರಿಯಾಗಿ ರಗ್ಗು, ಚಾಪೆಯನ್ನು ಕೂಡ ಇಟ್ಟುಕೊಂಡಿರುವುದಿಲ್ಲ. ಸರ್ಕಾರಿ ಸ್ವಾಮ್ಯದ ವಸತಿ-ನಿಲಯಗಳ ಪರಿಸ್ಥಿತಿ ಇಂದಿಗೂ ಕೂಡ ಅದೇ ರೀತಿಯಲ್ಲಿ

---

೧. ಊರುಕೇರಿ, ಪು. ೧೬.
೨. ಅದೇ, ಪು. ೨೦

ಮುಂದುವರೆದುಕೊಂಡು ಸಾಗುತ್ತಿದೆ. ಹೇಳುವವರು, ಕೇಳುವವರು ದಿಕ್ಕು-ದಿವಾಳಿಗಳೇ ಇಲ್ಲದ ಪರಿಸ್ಥಿತಿಯನ್ನು ಸರ್ಕಾರಿ ವಸತಿ ನಿಲಯಗಳು ಅನುಭವಿಸುತ್ತಿವೆ. ಕೊನೆಯಲ್ಲಿ ಮುದ್ದೆ ಸಾರಿಗಾಗಿ ಹುಡುಗರು ತಟ್ಟೆಯ ಸಮೇತವಾಗಿ ಮುನ್ನುಗ್ಗುತ್ತಿದ್ದರು. ಅನ್ನಕ್ಕಾಗಿ ಹಾಹಾಕಾರ ಧ್ವನಿಗಳು ಹಾಸ್ಟೆಲ್ ಜೀವನದ ಸಾಮಾನ್ಯ ಸಂಗತಿಗಳಾಗಿದ್ದವು. ಕೆಲವು ಭಾನುವಾರಗಳಲ್ಲಿ ಹಬ್ಬದ ದಿನಗಳಲ್ಲಿ ಗೋಣಿಚೀಲವನ್ನು ಕೈಯಲ್ಲಿಡಿದು ಮಾರ್ಕೆಟ್ಟಿನ ಅಂಗಡಿಗಳ ಮುಂದೆ ನಿಂತು ದವಸಧಾನ್ಯ, ತರಕಾರಿಗಳನ್ನು ಬೇಡಿಕೊಂಡೇ ವಿದ್ಯಾರ್ಥಿಗಳು ವಸತಿನಿಲಯಗಳಲ್ಲಿ ಕಾಲ ಕಳೆಯುತ್ತಿದ್ದರು.

"ಊರುಕೇರಿ ಕೃತಿ ಸಾಂಸ್ಕೃತಿಕ ರಾಜಕಾರಣ ಪ್ರಜ್ಞಾಪೂರ್ವಕವಾಗಿ ನಂಬಿಕೊಂಡಿರುವ ಅನೇಕ ಕೀಳರಿಮೆಯನ್ನು ಕಾಲೆಳೆದು ಬೀಳಿಸುತ್ತದೆ. ದಲಿತರಿಗೆ ಗತಕಾಲದ ಸಂಸ್ಕೃತಿಯಲ್ಲಿ ಹಿರಿಯರು ಪಾಲುದಾರಿಕೆ ಇಲ್ಲಿ ಎಂಬ ನಂಬಿಕೆಯನ್ನು ಸಿದ್ದಲಿಂಗಯ್ಯ ತನ್ನ ದೊಡ್ಡಪ್ಪನ ಬಗ್ಗೆ ಬರೆಯುತ್ತಾ ಹಂಗಿಸುತ್ತಾರೆ. ಆದರೆ ನೇರವಾಗಿ ಅಲ್ಲ, ಆ ದೊಡ್ಡಪ್ಪ ಕೇರಿಯ ನಾಯಕನಾಗಿ ಇಡೀ ಊರಿನಲ್ಲಿ ಗಣ್ಯನಾದಂತಹ, ಜೈಮಿನಿ ಭಾರತ ಓದುತ್ತಿದ್ದ ವ್ಯಕ್ತಿ ಆದರೆ ಸಾಲಗಾರನಾಗಿ ಅವಮಾನ ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ."[೧] ಇಲ್ಲಿ ಸತ್ತಂತಹ ವ್ಯಕ್ತಿಯ ಕುಲದ ಆತ್ಮಗೌರವಕ್ಕೆ ಕುಂದುಬಾರದ ರೀತಿಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಆ ಕಾಲದಿಂದಲೂ ಈ ರಾಜಕಾರಣ ವ್ಯಕ್ತಿಯ ನೆಲೆಯಲ್ಲಿ ಕೇಂದ್ರೀಕೃತವಾಗಿಲ್ಲ. ಅದು ಸಮಷ್ಟಿಯ ಧೋರಣೆಯನ್ನು ಸೃಷ್ಟಿಸಲು ಈ ಪ್ರಸಂಗ ಮುಖ್ಯವಾಗಿ ನಿಲ್ಲುತ್ತದೆ.

ಅಂದಿನ ಸಮಾಜ ಸವರ್ಣೀಯರು, ಶ್ರೀಮಂತರು, ಬಂಡವಾಳ ಶಾಹಿಗಳ ಹಿಡಿತದಲ್ಲಿದ್ದಂತಹ ರಾಜಕಾರಣಕ್ಕೆ ದಲಿತನೊಬ್ಬನ ಹಸ್ತಕ್ಷೇಪ ಒಂದು ಹಳ್ಳಿಯಲ್ಲಿ ನಡೆದಿದೆ ಎಂದರೆ ಸೋಜಿಗವೆನಿಸುತ್ತದೆ. ದಲಿತರಿಗೂ ರಾಜಕಾರಣದಲ್ಲಿ ಆಸಕ್ತಿ ಹೆಚ್ಚಾಗಿ ಶ್ರೀಮಂತರ ವಿರುದ್ಧ ನಾವು ಜಯಶೀಲರಾಗುತ್ತೇವೆಂಬ ಹೆಗ್ಗಳಿಕೆಗೆ ಪಾತ್ರವಾಗಿ ಇದು ಕಂಡುಬಂದಿದೆ. ಆದರೆ ಶ್ರೀಮಂತರ ಪಟೇಲರ ವಿರುದ್ಧ ಪೈಪೋಟಿ ನಡೆಸಿ ಗೆಲ್ಲುತ್ತೇವೆಂಬ ನಂಬಿಕೆಯನ್ನು ಇಂದಿನ ರಾಜಕಾರಣಕ್ಕೆ ಕನ್ನಡಿ ಹಿಡಿದಂತಾಗಿದೆ. ಈ ಒಂದು ರಾಜಕೀಯದ ಬೆಳವಣಿಗೆಗೆ ಅಂದಿನ ಕಾಲದ ಅಂಬೇಡ್ಕರ್ ಅವರ ಮೇಲೆ ಪ್ರಭಾವ ಬೀರಿದರೆಂದು ಕಾಣುತ್ತದೆ. ಇಂತಹ ಘಟನೆಗಳನ್ನು ಸಿದ್ಧಲಿಂಗಯ್ಯನವರು

---

೧. ಬಡವರ ನಗುವಿನ ಶಕ್ತಿ, ಸಂ.ಎಚ್.ದಂಡಪ್ಪ, ಪು. ೨೬೫

ಸ್ವತಃ ತನ್ನ ಒಡಹುಟ್ಟಿದ ದೊಡ್ಡಪ್ಪನ ಸಂಗತಿಯನ್ನು ಇಂದಿನ ರಾಜಕೀಯಕ್ಕೆ ತಳುಕು ಹಾಕಿ ನೋಡುವ ಸಂದರ್ಭ ಬರುವುದಿಲ್ಲ. ಆದರೆ ದಲಿತರಲ್ಲಿಯೂ ತನ್ನ ಸಮುದಾಯ ಜನಾಂಗದ ಬಗ್ಗೆ ನಂಬಿಕೆಯುಳ್ಳ ಜನತೆಯನ್ನು ಇಂದು ಕಾಣುವುದು ಅಪರೂಪ. ದಲಿತರಲ್ಲಿ ಸ್ವಲ್ಪ ಮೇಲೆ ಬಂದು ತನ್ನ ಜೀವನಕ್ಕೆ ಸರಿಯಾದ ಮಾರ್ಗೋಪಾಯ ಸಿಕ್ಕ ನಂತರ ಬದಲಾಗುವುದು ಇಂದು ದಲಿತ ಜನಾಂಗ ಅಥವಾ ಸಮುದಾಯದ ಕೆಲವು ಜನತೆಯಲ್ಲಿ ಕಾಣಬಹುದು.

"ಬಾಲ್ಯ ಎನ್ನುವುದು ಬರೀ ವಯಸ್ಸಲ್ಲ ಅದೊಂದು ಸಮೃದ್ಧ, ಸೃಜನಶೀಲ ಸ್ಥಿತಿ ಬಾಲ್ಯ ಕಾಲದ ವಿವರಣೆಗಳು ಸಮೃದ್ಧವಾಗಿ ಅರಳಿ. ಒಂದರೊಳಗೊಂದು ಬೆರೆತು. ಬೆಳೆಯುತ್ತಾ ಹೋಗುವ ಸ್ಥಿತಿ ನಿಜಕ್ಕೂ ರೋಮಾಂಚನಕಾರಿ. ಇದು ಕುವೆಂಪು ಅವರಿಂದ ಹಿಡಿದು ಇಂದಿನ ತನಕ ಸಲ್ಲುವ ಮಾತು, ವಯಸ್ಕ ಸಂವೇದನೆಗೆ ತಕ್ಕಂತೆ ಆತ್ಮಕಥನ ಬರೆಯುವುದು ಕಷ್ಟವಾಗುತ್ತದೆ. ಸಾಮಾಜಿಕ ತೆಳುವರ್ಣನೆಗೆ ಅವು ಕೊನೆಗೊಳ್ಳುತ್ತವೆ."[೧]

ಗ್ರಾಮೀಣ ಮತ್ತು ನಗರ ಜೀವನದ ಮುಖಾಮುಖಿಯನ್ನು ಗುರುತಿಸಬಹುದು. ಊರುಕೇರಿಯ ಪ್ರಾರಂಭ ಹಳ್ಳಿಯ ಜೀವನದಲ್ಲಿ ತಾನು ಕಂಡು ಅನುಭವಿಸಿದ ನೋವು ಯಾವ ರೀತಿಯದು ಎಂದು ತಿಳಿಯಬಹುದು. ಗ್ರಾಮೀಣ ಜೀವನದಲ್ಲಿ ಜಾತೀಯತೆ, ಅಸ್ಪೃಶ್ಯತೆ, ಬಡತನ, ಹಸಿವು ಮುಂತಾದ ಕಷ್ಟಗಳನ್ನು ಕಂಡುಂಡಿದ್ದಾರೆ. ನಂತರ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಲು ನಗರ ಪ್ರದೇಶಗಳಿಗೆ ತೆರಳುವುದು ಅಲ್ಲಿಯೂ ಸಹ ಯಾತನಾಮಯ ಜೀವನ ಎಲ್ಲಾ ದಲಿತರನ್ನು ಬಿಡುವುದಿಲ್ಲ ಎಂಬುದಕ್ಕೆ ಊರುಕೇರಿಯಲ್ಲಿ ವ್ಯಕ್ತವಾದ ಗ್ರಾಮೀಣ ಮತ್ತು ನಗರ ಬದುಕಿನ ಮುಖಾ-ಮುಖಿಯಲ್ಲಿ ನಡೆದ ಘಟನೆಗಳಲ್ಲಿ ಹಳ್ಳಿಯ ಜೀವನಕ್ಕಿಂತ ನಗರ ಜೀವನ ಸ್ವಲ್ಪ ಬದಲಾಗಿದೆ.

ಆತ್ಮಕಥಾನಾಕಾರ ಮೊದಲಿಗೆ ತನ್ನ ಅನುಭವದ ಲೋಕದಿಂದ ಪ್ರತ್ಯೇಕ-ಗೊಳ್ಳುತ್ತಾನೆ. ಅನುಭವ ಲೋಕ ಅನುಭವಗಳ ವಾರಸುದಾರ ಆತ್ಮಕಥಾನಕಾರ ಈ ಮಾದರಿಯ ವಿನ್ಯಾಸ ಅನಾಯಾಸವಾಗಿ ಬಂದುಬಿಡುತ್ತದೆ. ಇಲ್ಲಿ ಎಂತಹ ಕಹಿ ಅನುಭವಕ್ಕೂ ತಾನೇ ಕೊನೆಯವನು ಎಂಬುದನ್ನು ಸ್ಥಾಪಿಸಲು ಗ್ರಾಮೀಣ ಮತ್ತು ನಗರ ಜೀವನದಲ್ಲಿ ಸಿಕ್ಕಿ ಇಂತಹ ದಟ್ಟ ದಾರುಣತೆಯನ್ನು ಬಿಂಬಿಸುತ್ತದೆ. ದಲಿತ

---

೧. ಬಡವರ ನಗುವಿನ ಶಕ್ತಿ, ಸಂ.ಎಚ್.ದಂಡಪ್ಪ, ಪು. ೨೬೫

ಕೌಟುಂಬಿಕ ಚಿತ್ರಣಗಳು ಸಹ ಕಾಣಿಸಿಕೊಳ್ಳುತ್ತವೆ. ಇಲ್ಲಿ ಕುಟುಂಬ ವ್ಯವಸ್ಥೆ ಸಾಧಾರಣವಾಗಿ ಅವಿಭಕ್ತ ಕುಟುಂಬದ ರೀತಿಯಲ್ಲಿದ್ದು ಮತ್ತೆ ಅವುಗಳು ಚಿಕ್ಕ ಚಿಕ್ಕ ಸಂಸಾರಗಳಾಗಿ ವಿಭಕ್ತ ಕುಟುಂಬಗಳಾಗಿರುವುದು ಕಂಡುಬರುತ್ತದೆ. ಇದು ಆತ್ಮಕಥನಕಾರರು ಹುಟ್ಟಿದ ಮಂಚನಬೆಲೆಯ ಪರಿಸರದ ಕೌಟುಂಬಿಕ ಚಿತ್ರಣಗಳನ್ನು ಇಲ್ಲಿ ಗುರುತಿಸಬಹುದು.

"ಬಡತನ ಮತ್ತು ಪ್ರತಿಭೆಗಳ ನಡುವಣ ಸಂಬಂಧ ಊರು-ಕೇರಿಯ ಒಂದು ಮುಖ್ಯವಸ್ತು. ದಲಿತ ಸಾಹಿತಿಯ ಆತ್ಮಕತೆಯನ್ನು ಓದುವುದು, ಏಕಕಾಲಕ್ಕೆ ಆಸಕ್ತಿ ಮತ್ತು ಆತಂಕಗಳನ್ನು ಹುಟ್ಟಿಸುತ್ತವೆ. ಇಲ್ಲಿ ಹೊಸ ಲೋಕವೊಂದರ ಶೋಧನೆ ಎಂಬ ಕಾರಣಕ್ಕೆ ಆಸಕ್ತಿ ಸವರ್ಣೀಯ ಸಮಾಜದ ಹಿಂಸೆ ಸಾಹಿತ್ಯ ಕೃತಿಯಲ್ಲಿಯೇ ಎದ್ದು ಕಾಣುತ್ತದೆ."[೧]

"ಈ ವ್ಯವಸ್ಥೆಯ ಪರಿಣಾಮವಾಗಿ ವೃತ್ತಿ ನಿರ್ಮಿತ ಜಾತಿ, ಕರ್ಮ, ಬಂಧನದ ನಿರ್ಧಾರಿತ ಮೌಲ್ಯವಾಗಿ ರೂಪುಗೊಂಡು ಜಾತಿ, ಸಾಮಾಜಿಕ ಸ್ಥಾನಮಾನದ ಮುಖ್ಯಸ್ತರವಾಯಿತು. ನಿಂದನೆಯಿಂದ ಹಿಡಿದು ಶಿಕ್ಷೆಯವರೆಗೂ ಒಂದು ಅಸ್ತ್ರವಾದ ಜಾತಿ, ಅಕ್ಷರ ಕಲಿಕೆಯು ಯಾರ ಹಕ್ಕು ಎಂಬುದರ ನಿರ್ಣಾಯಕ ಅಂಶವಾಗಿ ಪರಿಣಮಿಸಿತು. ಜಾತಿಯ ಕಾರಣ ಕೆಲವರಿಗೆ ಪೂರ್ಣ ನಿಷೇದ ಬಂದಿತು. ಅಕ್ಷರ ಕಲಿಕೆಯಲ್ಲಿ ಆಸಕ್ತಿಯಿಂದ ಕದ್ದು ಕೇಳಿದ ಅಪರಾಧಕ್ಕೆ ಕಿವಿಯಲ್ಲಿ ಕಾಯಿಸಿದ ಸೀಸವನ್ನು ಹೊಯ್ಯುವಂತಹ ಗಂಭೀರ ಶಿಕ್ಷೆಯು ಸಾಮಾನ್ಯವಾಯಿತು."[೨]

ಒಂದು ಕಾಲದಲ್ಲಿ ಶ್ರೀಮಂತರಿಗೆ ಸೀಮಿತವಾದ ಶಿಕ್ಷಣ. ವ್ಯವಸ್ಥೆಯನ್ನು ಕಾಣಬಹುದು. ಇಂಥ ಸ್ಥಿತಿಯನ್ನು ಸ್ವಾತಂತ್ರ್ಯ ನಂತರದಲ್ಲಿಯೂ ಸಹ ನಾವು ಇದನ್ನು ಕಾಣಬಹುದಾಗಿದೆ. ಬಡತನ ಮತ್ತು ಪ್ರತಿಭೆಗಳ ಮುಖಾ-ಮುಖಿಯನ್ನು ನಾವು ಊರುಕೇರಿಯಲ್ಲಿ ಹಲವು ಸಂದರ್ಭಗಳಲ್ಲಿ ಗುರುತಿಸಬಹುದು. ದಲಿತರಿಗೆ ಶಿಕ್ಷಣ ಎನ್ನುವುದು.

"ನೀರು ಇಳಿಯದ ಗಂಟಲಲ್ಲಿ ಕಡುಬು ತುರುಕಿದಂತೆ" ಅಂದರೆ ದಲಿತ ಜನಾಂಗ ಸಮುದಾಯಕ್ಕೆ ಶಿಕ್ಷಣ ಕೊಡಿಸುವುದು ಮುಖ್ಯವಾಗಿರಲಿಲ್ಲ. ತನ್ನ ಮನೆಗೆ

---

೧. ಬಡವರ ನಗುವಿನ ಶಕ್ತಿ, ಸಂ.ಎಚ್.ದಂಡಪ್ಪ, ಪು. ೨೬೨.
೨. ದಲಿತ ಮಾರ್ಗ, ಸಂ. ಅರವಿಂದ ಮಾಲಗತ್ತಿ, ಪು. ೪೦೧

ಬಂದ ಪತ್ರವನ್ನು ಓದಲು ಬಂದರೆ ಸಾಕು ಎನ್ನುವಂತಹ ಧೋರಣೆಯನ್ನು ಅಂದಿನ ದಲಿತ ಜನಾಂಗದ ಸ್ಥಿತಿಯನ್ನು ತಿಳಿಸುವಲ್ಲಿ ಇದು ಯಶಸ್ವಿಯನ್ನು ತಲುಪಿದೆ. "ನನ್ನ ತಾಯಿ ಒಂದು ದಿನ ನನ್ನ ಮಗನನ್ನು ಓದಿಸಬೇಕು ಅವನಿಗೆ ನೆಂಟರು ಬರೆದ ಕಾಗದ ಓದಲು ಬಂದರೆ ಸಾಕು ಆಮೇಲೆ ಬಿಡಿಸಿ ಬಿಡುತ್ತೇವೆ."[೧]

ಈ ಮೇಲಿನ ಮಾತುಗಳಿಂದ ನಮಗೆ ತಿಳಿದು ಬರುವುದೇನೆಂದರೆ ಅಂದಿನ ಪರಿಸರದಲ್ಲಿ ದಲಿತರ ಸಮೂಹದಲ್ಲಿ ಇದ್ದಂತಹ ಪರಿಸ್ಥಿತಿಯನ್ನು ಗಣನೆಗೆ ತಂದುಕೊಂಡು ಈ ಮಾತನ್ನು ಹೇಳಿರಬಹುದು. ಇಂಥ ಸಂದರ್ಭದಲ್ಲಿ ಬಡತನದ ಬೇಗೆಯಲ್ಲಿ ಬೆಂದ ವ್ಯಕ್ತಿಗಳು ಸಮುದಾಯದಲ್ಲಿ ಮುಂದೆ ಬರಲು ಸಾಧ್ಯವೆಂಬುದನ್ನು ತೋರಿಸಲು ಇಂದು ಸಿದ್ಧಲಿಂಗಯ್ಯನವರು ಸಾಕ್ಷಿಯಾಗಿ ನಿಲ್ಲುತ್ತಾರೆ. ಈ ರೀತಿಯ ಧೋರಣೆಯನ್ನು ದಲಿತ ಜನಾಂಗ ನಿರ್ಧಾರ ಮಾಡಿ ಅದನ್ನು ಹೋಗಲಾಡಿಸಲು ಪ್ರಯತ್ನಪಡಬೇಕು ಎಂದು ಹೇಳಲಾಗಿದೆ. ಕಲಿಯುವ ಆಸಕ್ತಿಯನ್ನು ಹೊಂದಿರುವವನು ಎಲ್ಲಾ ಕಷ್ಟಗಳನ್ನು ಅನುಭವಿಸಿಯೂ ಸ್ಮಶಾನದಲ್ಲಿಯಾದರೂ ಓದಿ ಮುಂದೆ ಬರಬಹುದೆಂಬುದಕ್ಕೆ ಇದು ನಿದರ್ಶನವಾಗುತ್ತದೆ.

ಯಾವುದೇ ದಲಿತ ಜನಾಂಗದಲ್ಲಿ ಹುಟ್ಟಿದ ವ್ಯಕ್ತಿಗಳು ಶಿಕ್ಷಣದ ಸಂದರ್ಭದಲ್ಲಿ ಕಂಡಂತಹ ಅವ್ಯವಸ್ಥೆಯ ಬಗ್ಗೆ ಧನಿ ಎತ್ತುವ ಮೂಲಕ ಹೋರಾಟಗಾರರಾಗಿ ರೂಪುಗೊಳ್ಳಲು ಕಾರಣವಾಯಿತು. ದಲಿತರಿಗೆ ತಮ್ಮ ಜೀವನದಲ್ಲಿ ಓದಲು ಹಾಸ್ಟೆಲ್ ವ್ಯವಸ್ಥೆ ಇದ್ದ ಕಾಲದಲ್ಲಿ ಸರಿಯಾದ ಊಟದ ವ್ಯವಸ್ಥೆಯಿಲ್ಲದ, ಅನ್ಯಾಯದ ವಿರುದ್ಧ ಬಂಡೇಳಲು ಹೊರಾಟ ಸಹಜವಾಗಿ ಬೆಳೆದು ಬಂದಿದೆ. ಅಂದಿನ ಸಮಾಜದಲ್ಲಿ ದಲಿತರ ಮೇಲೆ ನಡೆಯುತ್ತಿದ್ದ ದೌರ್ಜನ್ಯವನ್ನು ವಿರೋಧಿಸುವುದು ಅನಿವಾರ್ಯವಾಯಿತು. ಇದಕ್ಕೆ ಬಿಟ್ಟುಗೊಡಲು ದಲಿತ ಸಂಘರ್ಷ ಸಮಿತಿಯನ್ನು ಇದೇ ದಲಿತ ಸಮುದಾಯದ ಮೇಲೆ ನಡೆದ ಶೋಷಣೆಯನ್ನು ವಿರೋಧಿಸಲು ಹೊರಾಟವನ್ನು ಒಂದು ಅಸ್ತ್ರವಾಗಿ ಬಳಸಿ ಅಂದಿನ ಸಮಾಜದ ಕಣ್ಣು ತೆರೆಸಲು ಕಾರಣವಾಯಿತು.

ಬಡತನದ ನಡುವೆ ತಮ್ಮ ಪ್ರತಿಭೆಯನ್ನು ಮೆರೆಯಬಹುದೆಂಬುದಕ್ಕೆ ಈ ಆತ್ಮಕತೆ ಬಹಳ ಮುಖ್ಯವಾಗಿ ನಮ್ಮ ಮುಂದೆ ನಿಲ್ಲುತ್ತದೆ. ಅಂದಿನ ಸಾಮಾಜಿಕ ಒಳನೋಟಗಳು ದಲಿತ ಆತ್ಮಕತೆಯಲ್ಲಿ ತುಂಬಿಕೊಂಡಿರುತ್ತವೆ. ಸಾಮಾಜಿಕ

---

೧. ಊರುಕೇರಿ, ಪು. ೧೮

ಪರಿಸ್ಥಿತಿಯನ್ನು ತನ್ನ ಜೀವನದಲ್ಲಿ ನಡೆದ ಒಂದೊಂದು ಘಟನೆಯಾಗಿ ಹೇಳುವ ಪರಿಪಾಠ ದಲಿತ ಆತ್ಮಕತೆಗಳಲ್ಲಿ ಕಂಡುಬರುವ ಮುಖ್ಯ ಸಂಗತಿಯಾಗಿದೆ.

"ಬಾಲ್ಯ ಕಾಲದ ಸಂವೇದನೆಯ ಅಖಂಡ ಸ್ಥಿತಿ ವೈಯಕ್ತಿಕ– ಸಮಷ್ಟಿ, ಖಾಸಗಿ ಸಾರ್ವಜನಿಕ ಇತ್ಯಾದಿ ವರ್ಗೀಕರಣಗಳಿಂದ ಸ್ಥಿತಿ ಅದು. ವಯಸ್ಕ ಸ್ಥಿತಿ ತಾರತಮ್ಯ ನಿರ್ಮಾಣದ ವರ್ಗೀಕರಣಗಳ ಸ್ಥಿತಿ ಅದು. ತನ್ನ ಸಾಮಾಜಿಕ ಮುಖವಾಡಗಳನ್ನೇ ಸಮರ್ಥಿಸಿಕೊಳ್ಳುವ ವಿಸ್ತರಿಸುವ ಬರವಣಿಗೆಯಾಗಿ ಆತ್ಮಕಥನ ಬಳಕೆಯಾಗುತ್ತದೆ. ಭಂಗಿಸುವ, ನೋಯಿಸುವ ತನ್ನನ್ನೇ ವಿಕಟವಾಗಿ ಕಾಣುವ ಗುಣಗಳು ಇಲ್ಲದ ಆತ್ಮಕತೆ ಅಗ್ಗದ ಸ್ವಸಮರ್ಥನೆಯಾಗುತ್ತದೆ." [೧]

"ಊರುಕೇರಿ" ಆತ್ಮಕತೆಯು ಒಂದು ಜನಾಂಗದ ಸಾಂಸ್ಕೃತಿಕ ಕೃತಿಯಾಗಿ ಅಂದಿನ ಸಮಾಜದ ಸ್ಥಿತಿಯನ್ನು ಅನಾವರಣಗೊಳಿಸುವಲ್ಲಿ ಯಶಸ್ವಿಯಾಗಿದೆ. ತಮ್ಮ ಅನುಭವವನ್ನು ಸಿದ್ಧಲಿಂಗಯ್ಯನವರು ಈ ಆತ್ಮಕತೆಯಲ್ಲಿ ವೈಶಿಷ್ಟ್ಯಪೂರ್ಣವಾಗಿ ವ್ಯಕ್ತಪಡಿಸಿರುವುದನ್ನು ಕಾಣಬಹುದು.

ಊರುಕೇರಿ ಆತ್ಮಕತೆಯ ಒಬ್ಬ ದಲಿತ ವ್ಯಕ್ತಿಯ ಆತ್ಮಕತೆಯಾಗದೆ ಸಮಸ್ತ ದಲಿತ ವ್ಯಕ್ತಿಗಳ ಪರಿಸರದ ಪ್ರಾದೇಶಿಕತೆಯ ಸಾಂಸ್ಕೃತಿಕ ಒಳನೋಟವನ್ನು ಬಿಚ್ಚಿ ತೋರುವ ಒಂದು ಮಹಾನ್ ಕೃತಿಯಾಗಿ ಕಂಡುಬರುತ್ತದೆ.

"ಹೀಗಾಗಿ ತೀವ್ರವಾಗಿ ಅನುಭವಿಸಿದ ಹಾಗೂ ಪುನರ್ ಸೃಷ್ಟಿಸಿದ ಬಾಲ್ಯಕಾಲ ಮತ್ತು ಸ್ವಾರಸ್ಯಕರ ತೆಳುತನದಿಂದ ಪುನರ್ ಸೃಷ್ಟಿಸಿರುವ ಕಾಲೇಜು ದಿನಗಳು ಇಷ್ಟಕ್ಕೆ ನಿಂತಿದೆ ಎನ್ನುವುದು ಕನ್ನಡ ಸಂಸ್ಕೃತಿಯ ಅಲಿಖಿತ ನಿಯಮ ಮತ್ತು ನಂಬಿಕೆಗಳನ್ನು ಸಮರ್ಥಿಸುತ್ತದೆ. ಈ ದೃಷ್ಟಿಯಿಂದ ಆತ್ಮಕತೆಯನ್ನು ಓದಿದವನು ಬೆರಗಾಗದೆ ಇರಲಾರ. ನಗರದ ಜೀವನ ಇನ್ನೂ ಆತ್ಮಕತೆಗಳಲ್ಲಿ ಅಷ್ಟು ಆಳವಾಗಿ ಕಾಣದೇ ಇರುವ ಬಗೆಗೂ ಆತ ಬೆರಗಾಗದೆ ಕನ್ನಡ ಆತ್ಮಕತೆಗಳಲ್ಲಿ ನಗರಗಳೂ ಇದ್ದೂ ಇಲ್ಲದಂತೆ ಇವೆ. ಗ್ರಾಮೀಣ ಜೀವನದ ವಿವರಗಳು ಬಂದಷ್ಟು ಉತ್ಕಟವಾಗಿ ನಗರಗಳು ಬರುವುದಿಲ್ಲ. ವಿಶೇಷವಾಗಿ ಆತ್ಮಕತೆಗಳಿಗೆ ಮೀಸಲಾದ ಸಮಸ್ಯೆ ಇದು ಎನ್ನುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು." [೨]

---

೧. ಬಡವರ ನಗುವಿನ ಶಕ್ತಿ, ಸಂ. ಎಚ್.ದಂಡಪ್ಪ, ಪು. ೨೬೬.
೨. ಅದೇ, ಪು. ೨೬೬

"ಯಾವುದರ ಬಗೆಗೂ ತೀವ್ರ ರಾಗಾವೇಶ ಸಾಧ್ಯವಾಗದೆ ಸದಾ ತುಂಟತನ, ಕೊಂಕುನಗು, ಸಂಶಯದಲ್ಲೇ ಸುತ್ತಿ ಬೆಳೆದ ತಲೆಮಾರು ಅದು. ನಾವು ಅರ್ಧ ನಂಬಿಕೆ, ಅರ್ಧ ಸಂಶಯದಲ್ಲಿ ಹೇಳುತ್ತಿದ್ದುದ್ದನ್ನು ಅನೇಕ ಹುಂಬರು ಪೂರ್ಣ ಆವೇಶದಿಂದ ಸ್ವೀಕರಿಸಿ ಕಳೆದೆರಡು ದಶಕಗಳಲ್ಲಿ ಅನಾಹುತಗಳನ್ನು ಉಂಟು ಮಾಡಿದರು. ಸದಾ ಹುಡುಗಾಟಿಕೆಯಲ್ಲಿಯೇ ಎಲ್ಲವನ್ನು ನಡೆಸುತ್ತಿದ್ದ ನಮ್ಮ ಗೆಳೆಯರ ಗುಂಪಿನ ಕಾರ್ಯಗಳು ಸಮಕಾಲೀನ ಬದುಕಿನಲ್ಲಿ ಕೆಲವು ಒಳ್ಳೆಯದನ್ನು ಮಾಡಿದವು."[೧]

ಈ ಆತ್ಮಕತೆಯಲ್ಲಿ ಒಂದು ತಲೆಮಾರಿನ ಕಥೆಯನ್ನು ಒಳಗೊಂಡು ಪ್ರಕಟವಾಗಿರುವುದು ಕಂಡುಬರುವ ಸಂಗತಿಯಾಗಿದೆ. ಇಂದಿನ ಸಮಾಜಕ್ಕಿಂತ ಹಿಂದಿನ ಸಮಾಜದ ಭಿನ್ನ-ಹೊಳಹುಗಳನ್ನು ನಾವಿಲ್ಲಿ ಕಾಣಬಹುದು. ತಲೆಮಾರಿನ ಪರಿಸರದ ಸ್ಥಿತಿ, ಅಲ್ಲಿಯ ಜನರ ಬದುಕು ಮತ್ತು ಸಾಮಾಜಿಕವಾಗಿ ಜನರು ಅನುಭವಿಸುತ್ತಿರುವ ನೋವು, ಸಂಕಟಗಳು ಅದರ ಜೊತೆಗೆ ಜಾತೀಯತೆ, ಶೋಷಣೆ, ವರ್ಗ ಸಂಘರ್ಷಗಳು ಯಾವ ರೀತಿಯಲ್ಲಿ ನಡೆದುಕೊಂಡು ಬರುತ್ತಿವೆ ಎಂಬುದು ಸ್ಪಷ್ಟ ಚಿತ್ರಣವನ್ನು ಕಾಣಬಹುದಾಗಿದೆ.

ಈ ಆತ್ಮಕತೆಯ ಬಿಡುವಿನ ಬರವಣಿಗೆಯಲ್ಲ, ಅದೊಂದು ಹೊಸ ಬಗೆಯ ಕಥನದಂತಿದೆ. "ಇದು ಬಡತನ ನೋವಿನ ಕಥೆಯೂ ಅಲ್ಲ, ಸಾಧನೆಗಳ ಚರಿತ್ರೆಯೂ ಅಲ್ಲ. ತಾನು ಬೆಳೆದು ದೊಡ್ಡವನಾದ ಬಗೆಯನ್ನು ದಾಖಲಿಸುವ ಹಂಬಲವೂ ಇಲ್ಲಿಲ್ಲ. ಸೃಜನಶೀಲ ಮನಸ್ಸು ಬಡತನದಲ್ಲಿ ಹೊರಳಾಡುತ್ತಲೇ ಅದನ್ನು ಗೆಲ್ಲುತ್ತಾ ಅಪಮಾನ ಅನುಭವಿಸುತ್ತಲೇ ಅದರ ವಿರುದ್ಧ ಹೋರಾಟದ ಮನೋಭಾವವನ್ನು ಬೆಳೆಸಿಕೊಳ್ಳುತ್ತಾ ಸಮಾಜದ ವಾಸ್ತವ ಸ್ಥಿತಿಯನ್ನು ಒಪ್ಪಿಕೊಳ್ಳುತ್ತಲೇ ಅದಕ್ಕೆ ಮುಖಾಮುಖಿಯಾಗುತ್ತಾ ಸುತ್ತಲಿನ ಪರಿಸರಕ್ಕೆ ಆರೋಗ್ಯಪೂರ್ಣವಾಗಿ ಸ್ಪಂದಿಸಿದ ಕಥನವಿದು."[೨] ಎಂದು ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ ಹೇಳುತ್ತಾರೆ.

ಸಿದ್ಧಲಿಂಗಯ್ಯನವರು ಊರುಕೇರಿ ಆತ್ಮಕತೆಯಲ್ಲಿ ಅಬ್ಬರದ, ಆವೇಗ, ಆವೇಶದ ಧ್ವನಿಯನ್ನು ಎತ್ತುವುದೇ ಇಲ್ಲ, ನೋವು ಅಪಮಾನವನ್ನು ಗೆಲ್ಲುವ ಕ್ರಿಯೆಗೆ

---

೧. ಬಡವರ ನಗುವಿನ ಶಕ್ತಿ, ಸಂ.ಎಚ್.ದಂಡಪ್ಪ, ಪು. ೨೬೬
೨. ಮಣೆಗಾರ, ಪು. ೫

ಹಾತೊರೆಯುತ್ತದೆ. ಡಿ.ಆರ್.ನಾಗರಾಜ್ ಹಿನ್ನುಡಿಯಲ್ಲಿ ಸರಿಯಾಗಿಯೇ ಹೇಳಿದ್ದಾರೆ. "ಬಡತನ ಮತ್ತು ಪ್ರತಿಭೆಗಳ ನಡುವಣದ ಸಂಬಂಧ ಊರುಕೇರಿಯ ಒಂದು ಮುಖ್ಯವಸ್ತು. ಸಿದ್ಧಲಿಂಗಯ್ಯನವರ ಆತ್ಮಕತೆಯಲ್ಲಿ ದಲಿತ ಲೇಖಕರ ಕೃತಿಗಳಲ್ಲಿ ನಾವು ನಿರೀಕ್ಷಿಸಬಹುದಾದ ಅನೇಕ ಅಂಶಗಳಿವೆ. ಬಡತನ, ರೊಚ್ಚು, ಅಪಮಾನ ಇತ್ಯಾದಿಗಳೆಲ್ಲ ಇವೆ. ಆದರೆ ಇಡೀ ಕೃತಿಯಲ್ಲಿ ಹೊಸದಾದ ಅನಿರೀಕ್ಷಿತವಾದ ಒಂದು ಮುಖ್ಯಾಂಗವೂ ಇದೆ. ಅದು ಬಡತನ ಮತ್ತು ಹಿಂಸೆಯ ಬಗ್ಗೆ ಭೀತಿಯ ಗೈರುಹಾಜರಿ".

ಪಟ್ಟಭದ್ರ ಹಿತಾಸಕ್ತಿಗಳನ್ನು ವಿರೋಧಿಸುವ, ಜೀತತ್ವವನ್ನು ಧಿಕ್ಕರಿಸುವ ನಿರೀಕ್ಷೆಯನ್ನು ಇದು ಹೊಂದಿದೆ. ಸಿದ್ಧಲಿಂಗಯ್ಯನವರ ತಂದೆ ದ್ಯಾವಣ್ಣ ಐನೋರ ಹೊಲದಲ್ಲಿ ಎತ್ತಾಗಿ ನೊಗ ಎಳೆದ ಸಂದರ್ಭವನ್ನು ಯಾವ ದೃಷ್ಟಿಕೋನವನ್ನು ಮಾನದಂಡವಾಗಿ ಇಟ್ಟುಕೊಂಡು ನೋಡಿದರೂ ಕೂಡ ಅದನ್ನು ವ್ಯಾಖ್ಯಾನಿಸಬಹುದು. ಆತ್ಮಕತೆಯನ್ನು ಕುರಿತು ಸಿದ್ಧಲಿಂಗಯ್ಯನವರಿಗೆ ಹಿತ್ತಲ ಗುಣವಿದೆ ಎಂದು ಅನಂತಮೂರ್ತಿ ಹೇಳುತ್ತಾರೆ. ಸಿದ್ಧಲಿಂಗಯ್ಯನವರು ತಮ್ಮ ಕೃತಿಯಲ್ಲಿ ಚಲನಶೀಲ ಬಡತನ ಸಂಸ್ಕೃತಿಯ ಗುಣವನ್ನು ಅನುಸರಿಸಿಕೊಂಡಿದ್ದಾರೆ. "ಸಾಕುವುದಕ್ಕೆ ಆಗದಿದ್ದರೆ ಹುಟ್ಟಿಸಿದ್ದು ಏಕೆ? ಎಂದು ತಂದೆ-ತಾಯಿಗಳನ್ನು ಮಕ್ಕಳ ಕೇಳುತ್ತಾರೆ.

ಐಸ್‌ಕ್ಯಾಂಡಿ ಮಾರುತ್ತಿದ್ದವನು ಕಷ್ಟಪಟ್ಟು ಆತ್ಮವಿಶ್ವಾಸದಿಂದ ಓದಿ ಕೆಲಸಕ್ಕೆ ಸೇರಿದ. ಇವೆಲ್ಲ ಜಡತ್ವವನ್ನು ಚಲನಶೀಲವಾಗಿಸುವ ಸ್ವರೂಪದ ಉದಾಹರಣೆಗಳಾಗಿವೆ. ರೊಚ್ಚು, ಆವೇಶ ಎಲ್ಲವೂ ಕೂಡ ಸಾತ್ವಿಕ ರೂಪದಲ್ಲಿ ಹೆಣೆಯಲ್ಪಟ್ಟಿವೆ.

ಸ್ವತಃ ಕಥನಕಾರರು ಅನುಭವಿಸಿದ ಸಮಸ್ಯೆಗಳ ಚಿತ್ರಣವನ್ನು ಓದುಗರಿಗೆ ಮೈನವಿರೇಳುವಂತೆ ಚಿತ್ರಿಸಿರುವುದು ಕಂಡುಬರುತ್ತದೆ. ಇಂದಿನ ತಲೆಮಾರಿನ ಅನೇಕ ಘಟನೆಗಳು ದಾಖಲೆಯಾಗಿರುವುದು ಕಂಡುಬರುತ್ತದೆ. ಈ ಸಂಗತಿಗಳು ಹೋರಾಟದ ವಿವಿಧ ಹಂತಗಳನ್ನು ಪ್ರತಿನಿಧಿಸುತ್ತವೆ. ಒಬ್ಬ ಬಡತನದ ವ್ಯಕ್ತಿ ಸಾಮಾಜಿಕವಾಗಿ ಹೆದರದೆ ಛಲದಿಂದ ಬದುಕಿ ತನ್ನ ಸಾಧನೆಯ ಕಡೆಗೆ ತುಡಿಯುತ್ತಿರುವ ಹಲವಾರು ವ್ಯಕ್ತಿಗಳಿಗೆ ತೊರುಬೆರಳಾಗಿ ಈ ಆತ್ಮಕತೆ ಕಾಣಿಸುತ್ತದೆ.

## ಊರುಕೇರಿ ಭಾಗ-೨

ಸಿದ್ಧಲಿಂಗಯ್ಯನವರ 'ಊರುಕೇರಿ' ಭಾಗ-೨ ಆತ್ಮಕತೆಯು ೨೦೦೬ರಲ್ಲಿ ಪ್ರಕಟಗೊಂಡಿತು. ಈ ಆತ್ಮಕತೆಯು ಭಾಗ-೧ ಕ್ಕಿಂತ ಅತ್ಯಂತ ಭಿನ್ನವಾದೊಂದು ನೆಲೆಯಲ್ಲಿ ಸಾಗಿದೆ. ಒಂದು ದಲಿತ ಬದುಕಿನ ಸಹಜಸಮ್ಮಾನಗಳು ಭಾಗ-೧ರಲ್ಲಿ ಒಡಮೂಡಿದಂತೆ ಭಾಗ-೨ರಲ್ಲಿ ಕಂಡುಬರುವುದಿಲ್ಲ, ದಲಿತ ಸಂವೇದನೆಯ ಸಹಜ ಸತ್ಯಗಳು ದಲಿತ ಜಾತ್ಯತ್ವದ ನೆಲೆಗಳು ಕೋಪ, ಆವೇಶ, ಅವೇಗಗಳನ್ನು ದಲಿತತ್ವದ ಅಂಶಗಳಿಂದ ಭಾಗ-೧ ಆದ್ಯಂತ್ಯಗೊಳಿಸುತ್ತದೆ. ಆದರೆ ಅಷ್ಟೊಂದು ಪರಿಣಾಮಕಾರಿಯಾದ ಸ್ಥಿತಿಗಳು ಭಾಗ-೨ರಲ್ಲಿ ಸ್ಥಿತ್ಯಾಂತರಗೊಂಡಿವೆ. ಒಬ್ಬ ಸಾಮಾನ್ಯ ಬಡವ್ಯಕ್ತಿ ಅನುಭವಿಸಿದಂತಹ ಮೊದಲ ಭಾಗ, ಆದರೆ ಮುಂದುವರೆದ ಭಾಗದಲ್ಲಿ ಸಭೆ ಸಮಾರಂಭಗಳು, ಕವಿಯಾಗಿ, ದಲಿತ ಕವಿಯಾಗಿ ಬೆಳೆಯುತ್ತಿರುವಂತಹ ಅಂಶಗಳು ಎದ್ದು ಕಾಣುತ್ತವೆ.

ದಲಿತರ ನೋವಿನ ಅಂತರಾಳದ ದಣಿದ ನೋವಿನ ಕತೆಗಳು ಎಷ್ಟು ಹೇಳಿದರೂ, ಬರೆದರೂ ಕಡಿಮೆಯೆ ಸರಿ. ಮೊಗೆದೆಷ್ಟು, ಎಳೆದಷ್ಟು ನೋವಿನ ಎಳೆಗಳು ಸಿಗುತ್ತವೆ. ಹಾಗೆಯೇ ಡಾ. ಸಿದ್ಧಲಿಂಗಯ್ಯನವರು ಭಾಗ-೨ ನ್ನು ಬರೆದಿದ್ದಾರೆ. 'ಹೊಲೆಮಾದಿಗರ ಹಾಡಿನ ಕವಿ" ಎಂದು ಡಾ. ಚಂದ್ರಶೇಖರ ಪಾಟಿಲರು ಕರೆದರು. ಇಷ್ಟೊತ್ತಿಗಾಗಲೇ ಸಿದ್ಧಲಿಂಗಯ್ಯನವರು 'ಕವಿ'ಯಾಗಿ ದಲಿತ ಕವಿಯಾಗಿ ಬೆಳೆಯತೊಡಗಿದ್ದರು. ಸಾಹಿತ್ಯ ಸಮ್ಮೇಳನಗಳಿಗೆ ಸಂಬಂಧಿಸಿದಂತೆ, ಕಾವ್ಯಗಳನ್ನು ಕವಿಗೋಷ್ಠಿಗಳಲ್ಲಿ ವಾಚಿಸುವ ಹಾಗೂ ರಾಜಕೀಯದೊಂದಿಗೆ ಬೆರೆತುಕೊಂಡು ಬಂದಂತಹ ವಿಷಯಗಳನ್ನು ಭಾಗ-೨ರಲ್ಲಿ ನಮೂದಿಸಿದ್ದಾರೆ.

೧೯೭೬ರಲ್ಲಿ ಶಿವಮೊಗ್ಗದಲ್ಲಿ ನಡೆದ ಕನ್ನಡ ಸಹಿತ್ಯ ಸಮ್ಮೇಳನದಲ್ಲಿ ಸಿದ್ಧಲಿಂಗಯ್ಯನವರನ್ನು ಕನ್ನಡ ಸಾಹಿತ್ಯ ಪರಿಷತ್ತು ಕವಿಯೆಂದು ಘೋಷಿಸಿ ಆಹ್ವಾನಿಸಿತ್ತು. ಈ ಸಮ್ಮೇಳನಕ್ಕೆ ಎಸ್.ವಿ.ರಂಗಣ್ಣನವರು ಅಧ್ಯಕ್ಷರಾಗಿದ್ದರು. ಈ ಸಭೆಯಲ್ಲಿ ಸುಮತೀಂದ್ರನಾಡಿಗರು "ನನಗೆ ಸರ್ಕಾರಿ ಕೆಲಸ ಕೊಡದೆ ಇದ್ದರೂ ಚಿಂತೆಯಿಲ್ಲ, ನಾನು ಬೀದಿಯಲ್ಲಿ ಬೋಂಡಾ ಮಾರಿ ಜೀವಿಸುತ್ತೇನೆ ಎಂದು ನಿರುದ್ಯೋಗಿಗಳ ಪರವಾದ ಭಾಷಣವನ್ನು ಮಾಡಿದರು. ಇದಕ್ಕೆ ಪೂರಕವಾಗಿ ಸಿದ್ಧಲಿಂಗಯ್ಯನವರು 'ಒಂದುಪದ" ಕವಿತೆಯ 'ಇಕ್ರಲಾ ವದೀರ್ಲಾ' ಎಂಬ

ಸಾಲುಗಳನ್ನು ಓದಿದರು. ಸಾಮಾನ್ಯ ಜನರ ಬದುಕನ್ನು ನೊಡಿ. ಈ ಕವಿತೆಯನ್ನು ಮನವರಿಕೆ ಮಾಡಿಸುತ್ತಾರೆ. ಯಾಕೆ ಸಾಮಾನ್ಯ ವ್ಯಕ್ತಿಗಳ ಬದುಕು ಮತಾಂಧರಿಗೆ ಅರಿವಾಗುವುದಿಲ್ಲ. ಈ ದೇಶದ ಸರ್ಕಾರಗಳಿಗೆ ಅರ್ಥವಾಗುವುದಿಲ್ಲ ಎಂದು ಕವಿತೆಯ ರೂಪದಲ್ಲಿ ತಿಳಿಯಪಡಿಸಿದ್ದರು. ದಲಿತ ಜಾಗೃತಿ ಸಮಾರಂಭವೊಂದರಲ್ಲಿ ಸಿದ್ಧಲಿಂಗಯ್ಯನವರು ಭಾಗವಹಿಸಿದ್ದರು. ಈ ಸಭೆಯಲ್ಲಿ ರಾಜ್ಯದ ಹಲವು ದಲಿತ ನಾಯಕರು ಪಾಲ್ಗೊಂಡಿದ್ದರು. ಆ ನಾಯಕರು ಮಾಡಿದ ಭಾಷಣ, ಅತ್ಯಂತ ಪರಿಣಾಮಕಾರಿಯಾದುದಾಗಿತ್ತು. ಸಭೆಯಲ್ಲಿದ್ದ ಮಹಿಳೆಯರನ್ನು ಉದ್ದೇಶಿಸಿ ನೀವೆಲ್ಲಾ ಹೀಗೆ ಕುಳಿತರೆ ಆಗುವುದಿಲ್ಲ. ಎದ್ದೇಳಿ ಹಿಟ್ಟಿನ ದೊಣ್ಣೆ ಹಿಡಿದುಕೊಂಡು ಮುನ್ನುಗ್ಗಿ, ಅದೂ ಇಲ್ಲದಿದ್ದರೆ ಪೊರಕೆ ಹಿಡಿದು ನುಗ್ಗಿ, ಆ ಊರಿನ ದೇವಸ್ಥಾನಕ್ಕೆ ನುಗ್ಗಿ ಎಂದು ಆವೇಶದಿಂದ ಕರೆಕೊಟ್ಟರು. ಗಂಡಸರು ಏನು ಮಾಡುತ್ತಿದ್ದೀರಿ ನೀವೇನು ಬಳೆತೊಟ್ಕೊಂಡಿದ್ದೀರಾ ಇತ್ಯಾದಿ ಮಾತುಗಳಿಂದ ಪುರುಷರನ್ನು ಪ್ರಭಾವಿಸಿ ದೇವಸ್ಥಾನ ಪ್ರವೇಶಿಸಿದರು.

ದೇವರು ಇದ್ದಾನೆ ಎನ್ನುವುದಾದರೆ ಎಲ್ಲಾ ಜಾತಿಯ ಜನರನ್ನು ಸಮಾನ ದೃಷ್ಟಿಯಿಂದ ನೋಡಬೇಕಾದ ಅಗತ್ಯತೆ ಇತ್ತು, ಇದೆ. ಆದರೆ ದಲಿತರಿಗೆ ದೇವಸ್ಥಾನ ಪ್ರವೇಶ ನಿಷೇಧವನ್ನು ದೇವರು ಧಿಕ್ಕರಿಸಲು ಸಾಧ್ಯವಿಲ್ಲವೇ? ಇದನ್ನು ನೋಡಿದಾಗ ಕಲ್ಲುದೇವರ ಮುಂದೆ ಅತ್ತು ಕರೆದುದು ಸಾಕು" ಎನ್ನುವ ಸಾಲುಗಳು ನೆನಪಿಗೆ ಬರುತ್ತವೆ. ಈ ನಿಷೇಧಾರಾಧನಾ ಮೂರ್ಖರಿಗೆ ಏನೆಂದು ಹೇಳಬೇಕು. ಶಿವನೇ ಬೇಟೆಗಾರನಾಗಿ ಕಾಡುಮೃಗಗಳನ್ನು ಬೇಟೆಯಾಡಿ ಚರ್ಮವನ್ನು ಉಡುಪು-ಹೊದುಪು ಆಗಿ ಬಳಸಿಕೊಂಡು ಬದುಕುತ್ತಾನೆಂದರೆ ಅವನ ಆರಾಧಕರು ಅನುಸರಿಸುತ್ತಿರುವ ಮಡಿ-ಮೈಲಿಗೆ ಯಾವರೀತಿಯದು? ಉತ್ತರವೇ ಇಲ್ಲ ಯಾವ ಕಾರಣಕ್ಕೆ ದಲಿತರಿಗೆ ದೇವಸ್ಥಾನ ಪ್ರವೇಶ ನಿಷೇಧ? ಈ ಪ್ರಶ್ನೆಗೆ ಯಾರೂ ಉತ್ತರವನ್ನು ನೀಡಲಾಗಿಲ್ಲ, ನೀಡುತ್ತಿಲ್ಲ.

ಸಿದ್ದಲಿಂಗಯ್ಯನವರಿಗೆ ದೇವರು ಇರುವ ಬಗ್ಗೆ ನಂಬಿಕೆ ಇರಲಿಲ್ಲ. ಹುಡುಗಿ-ಹುಡುಗ ಪ್ರೀತಿಸುತ್ತಿದ್ದರು. ಜ್ಯೋತಿಷ್ಯಗಾರನ ಹತ್ತಿರಕ್ಕೆ ಹೋಗಿ ಹುಡುಗ ತನ್ನ ಸಮಸ್ಯೆಯನ್ನು ಹೇಳಿಕೊಂಡ ಅದಕ್ಕೆ ಜ್ಯೋತಿಷ್ಯ ಕದ್ದು ಹೋಗಲು ಸಲಹೆ ನೀಡಿದ. ಆದರೆ ಆ ಹುಡುಗಿ ಜ್ಯೋತಿಷಿಯ ಮಗಳೇ ಆಗಿದ್ದಳು. ಈಗ ಎಲ್ಲಿ ಹೋಯಿತು

ಭವಿಷ್ಯ, ಜ್ಯೋತಿಷ್ಯ? ಹೀಗೆ ಉದಾಹರಣೆಯನ್ನು ಕೊಡುತ್ತಾರೆ. ಅವರಿವರ ಮನೆಯಲ್ಲಿ ಮನೆಕೆಲಸ ಮಾಡಿಕೊಂಡು ಜೀವನ ಹೊರೆಯುತ್ತಿದ್ದ ಹೆಂಗಸೊಬ್ಬಳು ಕೊಡಬೇಕಿದ್ದ ಸಾಲಕ್ಕೆ ಬಡ್ಡಿ ಹಣ ಕೊಡುವವರೆಗೂ ಮಗುವನ್ನು ತನ್ನ ಮನೆಯಲ್ಲಿ ಒತ್ತೆ ಇಟ್ಟುಕೊಳ್ಳುತ್ತೇನೆಂದು ಮಗುವಿನೊಂದಿಗೆ ಹೊರಟುಹೋದನು" ಸಮಾಜದಲ್ಲಿ ಆರ್ಥಿಕವಾಗಿ ಬಲಿಷ್ಠವಾಗಿರುವವರು ಸಾಮಾನ್ಯ ಜನರನ್ನು ತಮ್ಮ ದಾಳದಲ್ಲಿ ಸಿಕ್ಕಿಸಿಕೊಂಡು ಬಳಸಿಕೊಳ್ಳುತ್ತಾರೆ. ಕೇವಲ ಸ್ವಲ್ಪ ಹಣಕ್ಕಾಗಿ ಮಗುವನ್ನೇ ಕೊಂಡೊಯ್ದ ಪ್ರಸಂಗ ನಮ್ಮಲ್ಲಿ ಅಪಾರವಾಗಿ ನಡೆದಿವೆ. ಆದರೆ ಅಂತಹ ಕ್ರೂರ ವ್ಯವಸ್ಥೆಗಳು ಇಂದು ಕಣ್ಮರೆಯಾಗಿದೆ ಎಂದು ಹೇಳಬಹುದು.

ಸಿದ್ಧಲಿಂಗಯ್ಯನವರು ದಲಿತ ಕವಿ ಎಂದಷ್ಟೆ ನೋಡಿದರೆ ಸಾಲದು. ಅವರು ಹಾಸ್ಯ ಕವಿಯಂತೆ ಮಾತನಾಡುತ್ತಾರೆ. 'ಕಳ್ಳಬೆಕ್ಕು' ಶೀರ್ಷಿಕೆಯ ವಿವರಣೆಯಲ್ಲಿ ಬಾನಂದೂರು ಕೆಂಪಯ್ಯನವರೊಂದಿಗೆ ರೂಮೇಟ್ ಆಗಿರುತ್ತಾರೆ. ಒಂದು ದಿನ ಬೆಳಗಿನ ಜಾವ ಎಚ್ಚರಗೊಂಡು ಸ್ಟವ್ ಮೇಲೆ ಕುದಿಯುತ್ತಿದ್ದ ಹಾಲನ್ನು ತಮಾಷೆಗೆಂದು ಆರಿಸಿ ಕುಡಿದು ನೀರನ್ನು ತುಂಬಿ ನಾನು ಅನುಮಾನ ಬರದಂತೆ ನಿದ್ರೆಯ ನಟನೆ ಮಾಡುತ್ತಿದ್ದೆ ಎದುರು ಕೊಠಡಿಯ ವ್ಯಕ್ತಿಯನ್ನು ಲೇ ಕೇಳಿದ್ರೆ ಒಂದ್ ಲೋಟ ಹಾಲ್ ಕೊಡ್ತಿರ್‌ಲಿಲ್‌ವೇನೋ? ಯಾಕೋ ಇಂಥ ಹಲ್ಕ ಕೆಲ್ಸ ಮಾಡ್ದೆ? ನನ್ನ ಹತ್ರ ನಿನ್ನ ನಾಟ್ಕ ನಡೆಯೋಲ್ಲ ಎಂದು ಬಯ್ಯುತ್ತಾರೆ. ಈ ಅಪಮಾನವನ್ನು ಸಹಿಸಲಾರದ ಎದುರು ಕೊಠಡಿಯ ವ್ಯಕ್ತಿ ಸಿದ್ಧಲಿಂಗಯ್ಯನವರ ಮೇಲೆ ಅನುಮಾನ ಬಂದು ಒಂದು ದಿನ ಮುಂಜಾನೆಯಲ್ಲಿ ಕೆಂಪಯ್ಯನವರು ಇಲ್ಲದಿದ್ದಾಗ ಪರೀಕ್ಷಿಸಬೇಕೆಂದು ಆ ವ್ಯಕ್ತಿ ಕೆಂಪಯ್ಯನವರ ರೂಮಿಗೆ ಬಂದು ಅವಿತುಕೊಂಡಿದ್ದರು. ಆದರೆ ಇದನ್ನು ಅರಿತ ಸಿದ್ಧಲಿಂಗಯ್ಯನವರು ಗೊತ್ತಿಲ್ಲದವರಂತೆ ಮಲಗಿಕೊಂಡಿದ್ದರು. ಕೊನೆಗೂ ಕೂಡ ಸಿದ್ಧಲಿಂಗಯ್ಯನವರ ಕಳ್ಳಬೆಕ್ಕು ತನಗೆ ಸಿಗಲಿಲ್ಲ. ಇಲ್ಲಿ ಸಿದ್ಧಲಿಂಗಯ್ಯನವರ ತಮಾಷೆಯ ಚಟುವಟಿಕೆಗಳು ಓದುಗರನ್ನು ಸಂತೋಷದ ಕ್ಷಣಕ್ಕೆ ಕೊಂಡೊಯ್ಯುತ್ತದೆ. ಕೇವಲ ಒಂದೇ ರೀತಿಯ ದಲಿತರ ರೊಚ್ಚು, ಆವೇಶ, ಆವೇಗಗಳಷ್ಟನ್ನೇ ಅಲ್ಲದೆ ಕೆಲವು ಹಾಸ್ಯ ಚಟಾಕಿಗಳನ್ನು ಇಲ್ಲಿ ನೀಡಿದ್ದಾರೆ.

ಕೆಂಗೇರಿ ಉಪನಗರದಲ್ಲಿ ದಲಿತ ವರ್ಗಕ್ಕೆ ಸೇರಿದ್ದ ಮಾಜಿ ಶಾಸಕರೊಬ್ಬರು ವಾಸವಾಗಿದ್ದರು. ಅವರ ವೇಷ-ಭೂಷಣ, ಠೀವಿಗಳನ್ನು ನೋಡಿದರೆ ಅವರು

ಮೇಲ್ವರ್ಗದವರಂತೆ ಕಾಣುತ್ತಿದ್ದರು. ಅವರು ಒಮ್ಮೆ ತಮ್ಮ ನಿವಾಸದಲ್ಲಿ ಸತ್ಯನಾರಾಯಣ ಪೂಜೆ ಮಾಡಿಸಿದರು. ಅನೇಕರನ್ನು ಆಹ್ವಾನಿಸಿ ಒಳ್ಳೆಯ ಭೋಜನ ವ್ಯವಸ್ಥೆ ಮಾಡಿಸಿದ್ದರು. ಇದರಲ್ಲಿ ಕಾಳೇಗೌಡ ನಾಗವಾರರವರನ್ನು ಆಹ್ವಾನಿಸಿದ್ದರು.. . . ಅಂದು ರಾತ್ರಿ ಹತ್ತುಗಂಟೆಯ ಸಮಯದಲ್ಲಿ ಕಾಳೇಗೌಡರು ವಾಕ್ ಹೋಗುತ್ತಿದ್ದರು. "ವ್ಯಾವ್ಯಾ" ಎಂಬ ಶಬ್ದ ಕೇಳಿ ಬಂದಂತಾಯಿತು. ಸಾಮಾಜಿಕವಾಗಿ ಅನೇಕರು ವ್ಯಾ ವ್ಯಾ ಎಂದು ವಾಂತಿ ಮಾಡಿಕೊಳ್ಳುತ್ತಿರುವ ದೃಶ್ಯ ಗೌಡರಿಗೆ ಕಾಣಿಸಿತು. ಕೆಲವರು ಬಹಳ ಸಂಕಟ ಪಡುತ್ತಿದ್ದರು. ಕೆಲವರು ಬಾಯಿಗೆ ಬೆರಳಿಟ್ಟುಕೊಂಡು ಬಲವಂತವಾಗಿ ವಾಂತಿ ಮಾಡಿಕೊಳ್ಳುತ್ತಿದ್ದರು. ಕೆಲವರು ಯಾರನ್ನೋ ಬಯ್ಯುತ್ತಿದ್ದರು. ವಾಂತಿ ಮಾಡುತ್ತಿದ್ದವರೆಲ್ಲ ಮಾಜಿ ಶಾಸಕರು ಸತ್ಯನಾರಾಯಣ ಪೂಜೆಯಲ್ಲಿ ಊಟ ಮಾಡಿದ್ದವರಾಗಿದ್ದರು. ಮಾಜಿ ಶಾಸಕರು ದಲಿತರೆಂದು ಗೊತ್ತಿರಲಿಲ್ಲ. . . . ಅವರು ಉಂಡದ್ದು ಖಾಲಿ ಆಗುವ ತನಕ ವಾಂತಿ ಮಾಡಿ ಕಾಣಿಕೆಯನ್ನು ಮಾತ್ರ ಮನೆಗೆ ತೆಗೆದುಕೊಂಡು ಹೋದರು."[೧]

ನೋಡಿ ದೇಶದ ಜಾತಿಯ ಜಾಯಮಾನ ಹೇಗಿದೆ. ಶರೀರದೊಳಗೆ ಸೇರಿರುವಂತ ಆಹಾರವನ್ನು ಬಲವಂತವಾಗಿ ಬೆರಳನ್ನು ಗಂಟಲಿಗೆ ಹಾಕಿ ವಾಂತಿಮಾಡುತ್ತಿದ್ದಾರೆ. ಅತ್ಯಂತ ರುಚಿಕರವಾದ ಹಾಗೂ ಸ್ವಚ್ಛವಾಗಿ, ಯೋಗ್ಯವಾಗಿರುವಂತಹ ಆಹಾರಕ್ಕೂ ಕೂಡ ಜಾತಿಯ ನೀರನ್ನು ಎರೆದು ಲೆಕ್ಕಚಾರಕ್ಕೆ ಒಳಗು ಮಾಡುತ್ತಿದ್ದಾರೆ. ಒಂದು ಒಪ್ಪತ್ತಿಗೂ ಊಟವಿಲ್ಲದೆ ನರಳುತ್ತಿರುವ ಜನರು ಒಂದೆಡೆ ವಾಸಮಾಡುತ್ತಿದ್ದರೆ ತಿಂದು ಹೆಚ್ಚಾಗಿ ವಾಂತಿ ಮಾಡುತ್ತಿರುವಂತಹ ಜನತೆ ಒಂದು ಕಡೆ ಇದ್ದಾರೆ. ತಿನ್ನುವ ಅನ್ನಕ್ಕೂ ಕೂಡ ಜಾತಿಯ ಬಣ್ಣದ ಲೇಪನವನ್ನು ಬಳಿದು ದಿನವಿಡೀ ಬಳಲುತ್ತಿದ್ದಾರೆ. ಈ ಮೇಲಿನ ವಿಷಯಕ್ಕೆ ಪೂರಕವಾಗಿ ಅನುಭವವೊಂದನ್ನು ನೆನಪಿಸುತ್ತೇನೆ. ಅಸ್ಪೃಶ್ಯ ಜಾತಿಯ ಯುವಕನೊಬ್ಬನ ಶರೀರದ ರಕ್ತದ ಗುಂಪು ಸವರ್ಣೀಯ ಜಾತಿಯ ಮಹಿಳೆಯ ಶರೀರಕ್ಕೆ ಅವಶ್ಯವಿದ್ದು ಆಕೆ ಸಾವು ಬದುಕಿನ ನಡುವೆ ಹೊರಾಡುತ್ತಿದ್ದಾಗ ಒಂದೇ ಹಾಸಿಗೆಯಲ್ಲಿ ಆ ದಲಿತ ಯುವಕನ ಶರೀರದಿಂದ ತೆಗೆದಂತ ರಕ್ತವನ್ನು ಸವರ್ಣೀಯ ಮಹಿಳೆಗೆ ನೀಡಿ ಆಕೆಯ ಜೀವವನ್ನು ಉಳಿಸಿದನು. ಈಗ ಆ ಮಹಿಳೆಯನ್ನು ಯಾವ ಜಾತಿಗೆ ಸೇರಿಸಬೇಕು. ಆ

---

೧. ಮುನ್ನುಡಿ, ಮಣೆಗಾರ, ಪ್ರೊ. ಕಾಳೇಗೌಡ ನಾಗವಾರ.

ಜೀವವನ್ನು ಯಾವ ಜಾತಿಯ ಮಾನದಂಡದಿಂದ ಅಳತೆ ಮಾಡಬೇಕು. ಇಂತಹ ಕೆಲವು ಪ್ರಶ್ನೆಗಳಿಗೆ ಉತ್ತರಗಳೇ ಸಿಗುವುದಿಲ್ಲ. ಆದ್ದರಿಂದ ಇಂದಿಗೂ ಭಾರತೀಯ ಸಮಾಜದಲ್ಲಿ ಇರುವಂತಹ ಇಂತಹ ಜಾತಿಯ ಆಚರಣೆಗಳು ಅನಗತ್ಯವಾಗಿವೆ. ಇವೆಲ್ಲವುಗಳನ್ನು ಓದುಗರ ಮತ್ತು ಸಮಾನ ಹೃದಯಗಳ ಮುಂದೆ ಮುಖ್ಯವಾಗಿ ವಿರೋಧಿಸುವ ನೆಲೆಯಲ್ಲಿ ಸಿದ್ದಲಿಂಗಯ್ಯನವರು ಬರೆಯುತ್ತಾರೆ.

ಇಂತಹ ವಿಷಯಗಳ ಜೊತೆ – ಜೊತೆಗೆ ತಮ್ಮ ಬಾಲ್ಯದ ಕೆಲವು ಕ್ಷಣಗಳನ್ನು ಕೂಡ ಮೆಲುಕು ಹಾಕಿದ್ದಾರೆ. ಬೀದಿ–ಬೀದಿಗಳಲ್ಲಿ ಬೆಂಕಿ ಪೊಟ್ಟಣಗಳನ್ನು ಆಯುವುದು ದೂರದವರೆಗೆ ಹುಡುಕುತ್ತಾ ಸಾಗಿದಂತೆಲ್ಲಾ ಬಣ್ಣ ಚಿತ್ರದ ಬೆಂಕಿ ಪೊಟ್ಟಣಗಳು ಸಿಗುತ್ತಿದ್ದವು. ಒಮ್ಮೆ ಯಾರೋ ಓಡಿ ಬಂದು ಸಿದ್ಧಲಿಂಗಯ್ಯನವರನ್ನು ಹಿಡಿದು ಕತ್ತನ್ನು ಹಿಚಿಕತೊಡಗಿದಾಗ ಬಾಲ್ಯದ ಗೆಳೆಯ 'ಜನ್ನಿ' (ಜನಾರ್ಧನ) ಬಂದು ಅವನನ್ನು ದೂರಕ್ಕೆ ತಳ್ಳಿ ರಕ್ಷಿಸಿದ್ದರು. ಅಂದರೆ ಜನಾರ್ಧನರವರು ಹಾಗೂ ಸಿದ್ಧಲಿಂಗಯ್ಯನವರು ಬಾಲ್ಯದ ಗೆಳೆಯರಾಗಿದ್ದು ಬೆಂಕಿಪೊಟ್ಟಣ, ಖಾಲಿ ಸಿಗರೇಟ್ ಪ್ಯಾಕ್‌ಗಳನ್ನು ಗಲ್ಲಿಗಳಲ್ಲಿ, ಮೋರಿಗಳಲ್ಲಿ ಆಯುತ್ತಿದ್ದರಂತೆ. ಬಾಲ್ಯ ಕಾಲದ ನೆನಪುಗಳು ಅತ್ಯಂತ ಆಕರ್ಷಕವಾಗಿದ್ದು ಅವುಗಳನ್ನು ಕೂಡ ಸಿದ್ದಲಿಂಗಯ್ಯನವರು ತಮ್ಮ ಆತ್ಮಕತೆಯಲ್ಲಿ ಗುರುತಿಸಿಕೊಂಡಿದ್ದಾರೆ.

ಸಿದ್ಧಲಿಂಗಯ್ಯ ಎಂದಕೂಡಲೇ ಎಪ್ಪತ್ತರ ದಶಕದ ದಲಿತ ಸಾಹಿತ್ಯ ನೆನಪಿಗೆ ಬರುತ್ತದೆ. ಅವರು ರಚಿಸಿದಂತಹ ಕವಿತೆಗಳೆಲ್ಲವೂ ಆವೇಶ, ಆಕ್ರೋಶವನ್ನು ಹುಟ್ಟಿಸುವಂತೆ ಇವೆ. ಒಮ್ಮೆ ಅಪ್ಪಗೆರೆ ತಿಮ್ಮರಾಜು ಅವರು ಸಿದ್ಧಲಿಂಗಯ್ಯನವರ " ಯಾರಿಗೆ ಬಂತು ಎಲ್ಲಿಗೆ ಬಂತು ನಲವತ್ತೇಳರ ಸ್ವಾತಂತ್ರ್ಯ" ಗೀತೆಯನ್ನು ಆಗಸ್ಟ್ ಹದಿನೈದರಂದು ಸ್ವಾತಂತ್ರ್ಯ ದಿನಾಚರಣೆಯಲ್ಲಿ ಹಾಡಿದರು. ಈ ಸ್ವಾತಂತ್ರ್ಯ ವಿರೋಧಿ ಹಾಡನ್ನು ಹಾಡಿದ್ದಕ್ಕೆ ಪೊಲೀಸ್‌ನವರು ತಿಮ್ಮರಾಜು ಅವರನ್ನು ಬಂಧಿಸುತ್ತಾರೆ. ಡಾ.ಸಿದ್ಧಲಿಂಗಯ್ಯನವರು ತಮ್ಮ 'ಊರುಕೇರಿ' ಆತ್ಮಕತೆಯಲ್ಲಿ ಯಾವುದೇ ಪ್ರತಿಕ್ರಿಯೆಯನ್ನು ಅಭಿವ್ಯಕ್ತಪಡಿಸದೆ ತಮ್ಮ ನಿಜಜೀವನದ ಘಟನೆಗಳನ್ನು ಪೋಣಿಸಿಕೊಂಡೊಯ್ಯುತ್ತಾರೆ. ಆದರೆ ಇದನ್ನು ಹೊರತುಪಡಿಸಿದ ಸಿದ್ಧಲಿಂಗಯ್ಯನವರ ಸಾಹಿತ್ಯ ಎಂತಹವರನ್ನು ಕೂಡ ಮೈನವಿರೇಳಿಸುವ ರೀತಿಯಲ್ಲಿ ಪ್ರೇರೇಪಿಸುತ್ತದೆ. ಯಾರಿಗೆ ಬಂತು ಸ್ವಾತಂತ್ರ್ಯ ಗೀತೆ ಒಂದು ಸಮಾಜವನ್ನೇ ಚುಚ್ಚಿ ಎದ್ದೇಳಿಸುವಂತೆ

ಮಾಡಿದೆ ಎಂದರೆ ಅವರ ಕವಿತೆಯ ಸಾಲುಗಳಿಗೆ ಇನ್ನೆಂಥಹ ಸುಧಾರಣಾ ಶಕ್ತಿ ಇದೆ ಎಂಬುದನ್ನು ನಾವು ಅರ್ಥೈಸಿಕೊಳ್ಳಬೇಕಾಗಿದೆ.

ಸಿದ್ಧಲಿಂಗಯ್ಯನವರನ್ನು ತಮ್ಮ ಆತ್ಮಕತೆ ಭಾಗ-೨ರಲ್ಲಿ ಅತ್ಯಂತ ಮುಖ್ಯವಾಗಿ ಬಾಲ್ಯ, ರಾಜಕೀಯ, ದಲಿತಪರ ಸಭೆ-ಸಮಾರಂಭಗಳಲ್ಲಿ ಭಾಗವಹಿಸುತ್ತಾ ಬಂದ ಹಾಗೆಯೇ ಬಂಡಾಯ ಸಾಹಿತ್ಯ ಸಂಘಟನೆಯ ಕಾರ್ಯಗಳು, ದಲಿತ ಸಾಹಿತ್ಯ ಪರಂಪರೆಯು ಕನ್ನಡದಲ್ಲಿ ಬೆಳೆದಂತಹ ನೆಲೆಗಳನ್ನು ಬಹಳ ವಿಶೇಷವಾಗಿ ಗುರ್ತಿಸಿದ್ದಾರೆ. ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಗ್ರಂಥಾಲಯದ ಎದುರಿನ ಪಾರ್ಕಿನಲ್ಲಿ ಕುಳಿತು ಬಂಡಾಯ ಲೇಖಕರು ಪರಿಷತ್ತಿನ ಸಮ್ಮೇಳನವನ್ನು ಬಹಿಷ್ಕರಿಸಿ ಬಂಡಾಯ ಸಾಹಿತ್ಯ ಸಮ್ಮೇಳನವನ್ನು ನಡೆಸುವ ನಿರ್ಣಯವನ್ನು ಕೈಗೊಂಡಿದ್ದರು. ಇದರಲ್ಲಿ ಕಾಳೇಗೌಡ ನಾಗಾವಾರ ಸಿ.ಜಿ. ಕೃಷ್ಣಸ್ವಾಮಿ, ಡಿ.ಆರ್.ನಾಗರಾಜ, ರಾಮದೇವ ರಾಕೆ, ಬರಗೂರು ರಾಮಚಂದ್ರಪ್ಪ ಶೂದ್ರ ಶ್ರೀನಿವಾಸ ಸಿದ್ಧಲಿಂಗಯ್ಯ ಎಲ್ಲರು ಸೇರಿ ಕರಪತ್ರವೊಂದನ್ನು ಸಿದ್ಧಪಡಿಸಿದರು. ಯಜಮಾನ ಸಂಸ್ಕೃತಿಯ ವಿರುದ್ಧ ಸಾಹಿತಿಗಳು ಬಂಡೇಳುವ ಅಗತ್ಯವನ್ನು ಅವರು ಅ ಕರಪತ್ರದಲ್ಲಿ ಪ್ರತಿಪಾದಿಸಿದ್ದರು. "ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ನುಡಿವ ಪ್ರಾಣಮಿತ್ರ" ಎಂಬ ವಾಕ್ಯವು ಈ ಕರಪತ್ರದಲ್ಲಿ ಎದ್ದು ಕಾಣುತ್ತಿತ್ತು. ನಾಡಿನಾದ್ಯಂತ ಇದ್ದಂತಹ ಪ್ರಮುಖ ಪ್ರಗತಿಪರ ಚಿಂತಕರನ್ನು. ಲೇಖಕರನ್ನು ಒಗ್ಗೂಡಿಸಿದ್ದರು. ನಾಡಿನ ಗಣ್ಯ ಕವಿಗಳಾಗಿದ್ದ ಜಿ.ಎಸ್.ಶಿವರುದ್ರಪ್ಪನವರು ಹಂಪನಾಗರಾಜಯ್ಯ, ದೇವನೂರು ಮಹಾದೇವ ಇವರೆಲ್ಲಾ ಪ್ರಗತಿ ಪರ ಚಿಂತಕರ ಪಾಲ್ಗೊಂಡಿದ್ದರು. ಅಲ್ಲದೆ ಹೊರ ರಾಜ್ಯಗಳಿಂದಲೂ ಕೂಡ ಹಲವಾರು ಪ್ರಗತಿಪರ ಕಾಳಜಿಯುಳ್ಳ ಕವಿಗಳನ್ನು ಆಹ್ವಾನಿಸಲಾಗಿತ್ತು. ಮದ್ರಾಸ್‌ನ ಶ್ರೀ ಶ್ರೀಯವರನ್ನು ಕರೆಸಲಾಗಿತ್ತು. ಅವರು ಈ ಸಭೆಯನ್ನು ಉದ್ಘಾಟನೆ ಮಾಡಿದರು. ಹಾಗೂ ಈ ಬಂಡಾಯ ಸಮ್ಮೇಳನಕ್ಕೆ ಆಂಧ್ರದಿಂದ ಲೇಖಕರಾಗಿದ್ದ ಪ್ರೊ. ಕೆ.ವಿ.ರಮಣಾರೆಡ್ಡಿ ಯವರನ್ನು ಪ್ರೊ. ಕೃಷ್ಣಮೂರ್ತಿ ಹನೂರು ಅವರು ಕರೆದುಕೊಂಡು ಬಂದಿದ್ದರು. ದೇವನೂರು ಮಹಾದೇವ ಅವರು ಸಮ್ಮೇಳನವನ್ನು ಕುರಿತು "ಸಮ್ಮೇಳನ ಅವಸರದಲ್ಲಿ ಆಯಿತು. ಈ ಬಂಡಾಯ ಶಿಶು ಏಳು ತಿಂಗಳಿಗೇ ಹುಟ್ಟಿದ ಮಗು ಎಂದೂ ಅವರು ಹೇಳಿದರು ಆದರೆ ನಾವು ಬಂಡೆಗಳ ಮೇಲೆ ಚಿಗುರೊಡೆಯಬೇಕು ಎಂದು ಅವರಾಡಿದ

ಮಾತು ಎಲ್ಲರ ಹೃದಯವನ್ನು ತಟ್ಟಿತು."[೧] ಜಡ್ಡು ಗಟ್ಟಿದಂತಹ ಪರಂಪರೆಯನ್ನು ಪ್ರಧಾನವೆಂದು ನಂಬಿಕೊಂಡು ಬಂದಿದ್ದಂತಹ ಕನ್ನಡ ಸಾಹಿತ್ಯ ಒಂದು ಅಲೆಯೂ ಪ್ರಗತಿಪರ ಕಾಳಜಿಯ ಮನೋಭಾವನೆಯನ್ನು ಹೊಂದಿದ್ದಂತಹ ಹಲವು ಸುದ್ದಿಗಟ್ಟುಗಳು ಬಿಚ್ಚಿಕೊಂಡವು. ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಅಲೆಯನ್ನು ಎಬ್ಬಿಸಬೇಕೆಂಬಂತಹ ಹೆಬ್ಬಯಕೆಯನ್ನು ಈ ಬಂಡಾಯ ಲೇಖಕರು ಹೊಂದಿದ್ದಾರೆಂದು ತಿಳಿದು ಬರುತ್ತದೆ. ಮಹಾರಾಷ್ಟ್ರದಿಂದ ದಯಾಪವಾರ್ ಮತ್ತು ಅರ್ಜುನ್ ಡಾಂಗೆ ಬಂದಿದ್ದರು. ಒಟ್ಟಾರೆಯಾಗಿ ಈ ಸಮ್ಮೇಳನವು ಕನ್ನಡ ನಾಡಿನಲ್ಲಿ ಹಾಗೂ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಕ್ರಾಂತಿಯನ್ನು ಸೃಷ್ಟಿಸಬೇಕೆಂಬ ಹೆಬ್ಬಯಕೆಯನ್ನು ಪ್ರಧಾನವಾಗಿ ಹೊಂದಿದ್ದರು. ಪರಿಣಾಮಕಾರಿಯಾದ ಭಾಷಣಗಳು ದಲಿತರನ್ನು ಎಚ್ಚರಗೊಳಿಸಲು ನೆರವಾದವು. ಹೊಸ ಹೊಸ ದಲಿತರ ಪರವಾದ ಧ್ವನಿಗಳು ಎದ್ದವು ಜೊತೆಗೆ ಯುವ ಲೇಖಕ-ಲೇಖಕಿಯರನ್ನು ಸೃಜಿಸಿರುವುದು. ಮಡಿಕೇರಿಯಲ್ಲಿಯೂ ಕೂಡ ಬಂಡಾಯ ಸಾಹಿತಿಗಳು ಸೇರಿಕೊಂಡು ಸಮ್ಮೇಳನವನ್ನು ಆರಂಭಿಸಿದರು. ಪ್ರಭಾತ್ ಪೇರಿಯವರು ಅಲ್ಲಿನ ಎಲ್ಲಾ ಕವಿಗಳು ಸೇರಿಕೊಂಡು ಕಾರ್ಯಕ್ರಮ ನಡೆಸಬೇಕೆಂದು ಕೋರಿದ್ದರು. ಅಂತೆಯೇ ಎಲ್ಲರೂ ಸೇರಿಕೊಂಡು ಮೆರವಣಿಗೆಯನ್ನು ಆರಂಭಿಸಿದರು. ಕಾರ್ಲ್‌ಮಾರ್ಕ್ಸ್, ಏಂಜಲ್ಸ್, ಲೆನಿನ್‌ರ ಗುಣಗಾನವನ್ನು ಮಾಡುತ್ತಾ ಸಾಗಿದ್ದರು. ಸಮ್ಮೇಳನದಲ್ಲಿ ಬಿ.ಕೃಷ್ಣಪ್ಪನವರು ಸಭೆಯಲ್ಲಿ ಜನರು ಇಲ್ಲದೆ ಇರುವುದನ್ನು ಪ್ರಸ್ತಾಪಿಸಿ ತಮ್ಮ ಭಾಷಣಕ್ಕೆ ಜನರ ಅಗತ್ಯವಿಲ್ಲ, ಗೋಡೆಗಳಿಗೆ ಭಾಷಣ ಮಾಡುತ್ತೇನೆ ಎಂದು ಬಹಳ ಆವೇಶದಿಂದ ಮಾತನಾಡಿದರು. ಸಿದ್ಧಲಿಂಗಯ್ಯನವರು ಬಹಳ ಮುಖ್ಯವಾದ ಘಟ್ಟವನ್ನು ತಮ್ಮ ಆತ್ಮಕತೆಯಲ್ಲಿ ಬರೆದಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಹೊಸದಾದೊಂದು ಸಂಘಟನೆ ಮತ್ತು ಸಾಹಿತ್ಯ ಚಳುವಳಿ ಹೊಸದಾಗಿ ರೂಪ ಪಡೆಯುತ್ತಿದ್ದಂತಹ ಕಾಲದಲ್ಲಿ ಬಹಳ ಅವಶ್ಯಕ ಅಂಶಗಳು ದೂರವಾಗಿದ್ದವು. ಜನರಲ್ಲಿ ಒಂದು ಕ್ರಾಂತಿಕಾರಕ ಮನೋಭಾವನೆಯನ್ನು ಹಾಗೂ ಸಾಹಿತ್ಯದಲ್ಲಿ ಬಂಡಾಯದ ಬದುಕನ್ನು ನೆಲೆ ನಿಲ್ಲುವಂತೆ ಮಾಡಲು ಬಹಳ ಶ್ರಮಿಸಿದ್ದಾರೆ. ಜನ ಸಾಮಾನ್ಯರಿಗೆ ಅರಿವಿನ ಪ್ರಜ್ಞೆಯನ್ನು ಮೂಡಿಸಿ ಅವರನ್ನು ಬಂಡಾಯ ಸಾಹಿತ್ಯ ಸಮ್ಮೇಳನಗಳ ಕಡೆಗೆ ಸೆಳೆದು ದಲಿತ ಪರ ಚಿಂತನೆಗಳು ಅವರಲ್ಲಿ ಬರುವಂತೆ ಮಾಡಲು ಹೊರಟಿದ್ದರು.

---

೧. ಮಣೆಗಾರ, ಪು. ೫೫

ಯಾವುದೇ ಒಂದು ಸಂಘ ಸಂಸ್ಥೆ, ಸಮ್ಮೇಳನಗಳನ್ನು ಹುಟ್ಟು ಹಾಕಿ ನಡೆಸಿಕೊಂಡು ಹೋಗುವಾಗ ಆರಂಭಿಕ ಸಮಸ್ಯೆಗಳು ಎದುರಾಗುವುದನ್ನು ನಾವಿಲ್ಲಿ ಅರಿಯುತ್ತೇವೆ.

**"ಮಣೆಗಾರ:ವಿಶ್ಲೇಷಣೆ"**

**ಲೇಖಕರ ಪರಿಚಯದೊಂದಿಗೆ:**

ತುಂಬಾಡಿ ರಾಮಯ್ಯ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ತುಂಬಾಡಿ ಗೊಲ್ಲಹಳ್ಳಿಯಲ್ಲಿ ೦೧-೦೬-೧೯೫೪ರಲ್ಲಿ ಜನಿಸಿದರು. ತಂದೆ ಕ್ಯಾತಪ್ಪ, ತಾಯಿ ಸಂಜೀವಮ್ಮ. ವಡ್ಡಗೆರೆ, ಕೊರಟಗೆರೆ ಮತ್ತು ತುಮಕೂರಿನಲ್ಲಿ ವಿದ್ಯಾಭ್ಯಾಸ ಮಾಡಿದರು.

ಕಲಾವಿದರು, ಸಾಹಿತಿಗಳು, ಹೋರಾಟಗಾರರ ಸಂಘ ಹಾಗೂ ಪ್ರಗತಿಪರ ಸಂಘಟನೆಯಲ್ಲಿ ತೊಡಗಿಸಿಕೊಂಡು ನೇಪಥ್ಯದಲ್ಲೇ ಇರಬಯಸುವ ಸಜ್ಜನ. ಜೊತೆಗೆ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಸದಾ ಒತ್ತಾಸೆ ನೀಡುವ ಮುಗ್ಧ ಮನಸ್ಸಿನವರು. ಈಗ ಕರ್ನಾಟಕದ ಸರ್ಕಾರದ ಕಾರ್ಮಿಕ ಇಲಾಖೆಯಲ್ಲಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಎಪ್ಪತ್ತರ ದಶಕದಲ್ಲಿ ಹುಟ್ಟನ್ನು ಪಡೆದ ದಲಿತ ಸಂಘರ್ಷ ಸಮಿತಿಯು ರಾಜ್ಯಾದ್ಯಾಂತ ಆರಂಭಿಸಿದ ಹೋರಾಟದಲ್ಲಿ ತಮ್ಮನ್ನು ಕ್ರಿಯಾಶೀಲವಾಗಿ ಅರ್ಪಿಸಿಕೊಂಡವರು. ಚಳುವಳಿಯ ಮೂಲಕವೇ ತಮ್ಮ ಅಭಿವ್ಯಕ್ತಿಯ ಸೂಕ್ಷ್ಮ ಗ್ರಹಿಕೆಗಳನ್ನು ಹಾಗೂ ಬೆಚ್ಚನೆಯ ನುಡಿಗಟ್ಟುಗಳನ್ನು ರೂಪಿಸಿಕೊಂಡವರು.

ದ್ವೇಷ, ಪ್ರತಿಕಾರ, ಕೀಳರಿಮೆಗಳ ಬಂಧನದಿಂದ ಬಿಡುಗಡೆ ಪಡೆದು ವಿಶಾಲ ತಳಹದಿಯ ಮಾನವೀಯ ನೆಲೆಗಟ್ಟಿನ ಮೇಲೆ ಹೊಸ ಸಮಾಜದ ಕಟ್ಟುವಿಕೆಗೆ ಹಂಬಲಿಸುವ ಇವರ "ಮಣೆಗಾರ" ಆತ್ಮಕಥನವು ಪ್ರಬುದ್ಧ ಮನಸ್ಸೊಂದರ ಸಂಯಮ ಹಾಗೂ ಅಂತಃಕರಣವನ್ನು ತೆರೆದು ತೋರುತ್ತದೆ.

ದಲಿತ ಆತ್ಮಕತೆಗಳು ಒಂದು ಜನಾಂಗದ ಒಂದು ಪರಿಸರದ ಕತೆಯಾಗಿ ರೂಪತಾಳಿರುತ್ತವೆ. ಆತ್ಮಕಥನಕಾರ ಒಬ್ಬ ನಾಯಕನಂತೆ ಕಂಡರೂ ಇಡೀ ಸಮುದಾಯವನ್ನು ಪ್ರತಿನಿಧಿಸುವುದು ಅವನ ಉದ್ದೇಶವಾಗಿರುತ್ತದೆ. ತುಂಬಾಡಿ ರಾಮಯ್ಯ ಅವರು ತಮ್ಮ ಆತ್ಮಕತೆಯಲ್ಲಿ ಯಾವುದೇ ರೀತಿಯ ಅಸಹನೆ ಮತ್ತು

ರೋಷವನ್ನು ತೋರದೆ ಅಸಮಾನತೆಯನ್ನು ಅನುಸರಿಸುವ ಈ ಸಮಾಜದ ಬಗ್ಗೆ ತೊರೆದಿರುವುದು ಮತ್ತು ಬದುಕಿನ ಸತ್ಯಸಂಗತಿಗಳನ್ನು ತೀರಾ ನಿರ್ಲಿಪ್ತವಾಗಿ ದಾಖಲಿಸಿರುವುದು ಅವರ ನಿರ್ಲಿಪ್ತವೂ ಪ್ರಭುದ್ದವೂ ಆದ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

"ದಲಿತ ಆತ್ಮಕತೆಗಳಲ್ಲಿ ಒಟ್ಟು ಸಮಾಜದ ನಿರ್ಲಕ್ಷಿತರು, ಅವಕಾಶಹೀನರು ಹಾಗೂ ತಬ್ಬಲಿ ಜಾತಿಯ ಮನುಷ್ಯರನ್ನು ಚಿತ್ರಿಸಿರುವುದು ಕಂಡುಬರುತ್ತದೆ. ಹೀಗಾಗಿ ಕನ್ನಡದ ಹೆಚ್ಚಿನ ದಲಿತ ಸಾಹಿತ್ಯ ಕೃತಿಗಳಲ್ಲಿ ಪ್ರತಿಭಟನೆಯು ಹೆಚ್ಚು ತೀವ್ರವಾಗಿದೆ, ಕಾವಿನೊಂದಿಗೆ ಮಾಗಿ ಬಂದವುಗಳಾಗಿವೆ."[೧]

ಬಡತನ ಎಂಬುದು ದಲಿತರ, ಶೋಷಿತರ ಸಮುದಾಯಕ್ಕೆ ಮೀಸಲು ಎಂಬಂತೆ ಇಲ್ಲಿ ಕಂಡು ಬಂದಿದೆ. ಇಲ್ಲಿ ತಮ್ಮ ಮನೆಯ ಪರಿಸ್ಥಿತಿಯನ್ನು ನೋಡಿ ಅದನ್ನು ಕಟ್ಟಿದವರ ನಿಸ್ಸಹಾಯಕತೆ ಮತ್ತು ತಬ್ಬಲಿತನವನ್ನು ಪ್ರಕಟಿಸುತ್ತಾರೆ. ಆತ್ಮಕತೆಯ ಪ್ರಾರಂಭದಲ್ಲಿ ಈ ಇಕ್ರಕಟ್ಟದವರು ಯಾರು? ಎಂದು ಪ್ರಶ್ನೆಯನ್ನು ಮಾಡುವ ಮೂಲಕ ಪ್ರಾರಂಬಿಸಿದ್ದಾರೆ. ಇಲ್ಲಿ ತಾವು ಹೇಳಿಕೊಳ್ಳುವ ರೀತಿಯನ್ನು ನೋಡಿದರೆ ತಿಳಿಯುತ್ತದೆ. ಅವರು ಇಡೀ ಜನಸಮುದಾಯವನ್ನು ಪ್ರತಿನಿಧಿಸುವ ವ್ಯಕ್ತಿಯಾಗಿ ಕಾಣುತ್ತಾರೆ.

"ಜಂತೆನೆಲ್ಲ ಕರಿಯಲ್ಲಪ್ಪನೋರ ಈರನಾಗಪ್ಪ ಕೊಟ್ಟದ್ದು. ಮೇಲ್ ಮುದ್ದೆ ಹಾಕೋ ದಿನ ಊರಿನ ಜನ ಮನೆಗೋಬ್ರಂತೆ ಬಂದು ಮೇಲ್ ಮುದ್ದೆ ಹಾಕೊಟ್ಟು ಅವತ್ತು ಮೇಲ್ ಮುದ್ದೆ ಹಾಕೋರಿಗೆಲ್ಲಾ ಆ ಪುಣ್ಯಾತ್‌ಗಿತ್ತಿ ಕುಂಚಿಟಿಗರ ಲಕ್ಷ್ಮಮ್ಮ ಹಿಟ್ಟು ಬೇಯ್ಸಾಕುದ್ಲು. ಆಗ ನಾವು ಪಟ್ಟ ಕಷ್ಟದ ಮುಂದೆ ಈ ತಿಗಣೆಗಳ ಕಾಟ ಯಾವ ಮಹಾ."[೨]

ಇಲ್ಲಿ ತಮ್ಮ ಪರಿಸ್ಥಿತಿಯನ್ನು ಕಟ್ಟಿಕೊಡುವ ರೀತಿಯಲ್ಲಿಯೇ ಲೇಖಕರು ಸೃಜನಶೀಲ ಮನಸ್ಸಿನಿಂದ ಅಲ್ಲಿನ ವಾಸ್ತವದ ಸ್ಥಿತಿಯನ್ನು ಅನಾವರಣ ಮಾಡಿರುವುದು ಕಾಣುತ್ತದೆ. ಒಂದಕ್ಕಿಂತ ಮತ್ತೊಂದು ಕಷ್ಟ ಏನಲ್ಲ ಎಂಬ ಧೋರಣೆಯನ್ನು ಕಾಣುತ್ತೇವೆ.

---

೧. ಮಣೆಗಾರ, ಪು. ೫.
೨. ಅದೇ. ಪು. ೧೦.

ಇಂಥ ಸಂದರ್ಭದಲ್ಲಿ ಇಡೀ ಸಮಾಜದ ಸುತ್ತಲಿನ ಪರಿಸರದಲ್ಲಿ ಕಾಣುವ ಶೋಷಣೆಯ ಬಗ್ಗೆ ಹೆಚ್ಚು ಒತ್ತುಕೊಟ್ಟು ಹೇಳಿದ್ದಾರೆ. ಬಡತನದ ಪರಿಸ್ಥಿತಿಯಲ್ಲಿರುವ ನೆಲೆಗೂ ಯೋಗ್ಯವಾದ ಸ್ಥಿತಿ ಇಲ್ಲದಿರುವುದನ್ನು ಅವರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

"ನಮ್ಮ ಜಾತಿಯವರಿಗೆ ಒಂದು ಹೊತ್ತಿನ ಊಟಕ್ಕೆ ಕಷ್ಟ ಪಡುವಂತಾದ ಮೇಲೆ ಕಪ್ಪ ಕಾಣಕೆಗಳನ್ನು ಕೊಡುವುದನ್ನು ನಿಲ್ಲಿಸಿದರು"[೧] ಅಂದರೆ ತಮ್ಮ ಗುರುಗಳಾದ ಆದಿಜಾಂಬವ ಮುನಿಗಳಿಗೆ ಕಪ್ಪಕಾಣಿಕೆಗಳನ್ನು ಕೊಡಬೇಕಾದ ಪರಿಸ್ಥಿತಿ ಇತ್ತು. ಇಂಥ ವೇಳೆಯಲ್ಲಿ ತಮಗೆ ತಿನ್ನಲು ಇಲ್ಲದಾಗ ಬೇರೆಯವರಿಗೆ ಕೊಡುವುದು ಎಷ್ಟು ಸಮಂಜಸವಾಗುತ್ತದೆ ಎಂಬ ಧ್ವನಿಯನ್ನು ಇಲ್ಲಿ ಕಾಣಬಹುದಾಗಿದೆ. ತನ್ನಲ್ಲಿ ಹೆಚ್ಚಾಗಿದ್ದರೆ ಮಾತ್ರ ದಾನ, ಧರ್ಮ ಮಾಡುವದು ಸಹಜ ಪ್ರವೃತ್ತಿ. ತಾವೇ ದುಡಿದು ಒಂದು ಹೊತ್ತಿನ ಊಟವನ್ನು ತಿಂದರೆ ಸಾಕು ಎನ್ನುವ ಸ್ಥಿತಿಯ ಜನರ ಧೋರಣೆ ಸರಿಯಾಗಿದೆ. ನಿರ್ದಿಷ್ಟ ಸಮುದಾಯದಲ್ಲಿ ಹುಟ್ಟಿದ ಕತೆಗಳಲ್ಲಿ ಆ ವರ್ಗದ ದುಃಖ ಕನಸುಗಳು ಇರುತ್ತವೆಂಬುದನ್ನು ನಾವು ಆಗಾಗ್ಗೆ ನೊಡುತ್ತಿರುತ್ತೇವೆ ಮೇಲೆ ನೋಡಿದಂತೆ ಬಡತನದ ಕತೆ ದಲಿತಕತೆಯಾಗಿ ಬದಲಾಗುವ ಸ್ಥಿತಿಯನ್ನು ಇಲ್ಲಿ ಗಮನಿಸಬಹುದು.

"ಒಂದೂರಾಗೆ ಗಂಡ ಹೆಂಡ್ತಿರಿದ್ರು, ಇಬ್ಬರೂ ಹಳೆ ಮೆಟ್ಟ ರಿಪೇರಿ ಮಾಡ್ಕೊಂಡು ಹೊಟ್ಟೆ ಹೊರೀತಿದ್ರು, ಇರೊಕ್ಕೊಂದು ಗುಡ್ಲು. ಉಡಾಕ್ಕೊಂದು ದುಪ್ಪಿ, ಆ ದುಪ್ಪೀನ್ನೇ ರಾತ್ರಿ ಹೊತ್ನಾಗೆ ಇಬ್ರೂ ಸೇರಿ ಹೊದ್ಕೊಂಡು ಮಲಗ್ತಿದ್ರು ಬೆಳಕಾಗುತ್ತಿದ್ದಂಗೆ ಹೆಂಡತಿ ಅದೇ ದುಪ್ಪಿನ ಸೀರೆ ಮಾಡ್ಕೊಂಡು ಉಟ್ಕಳ್ತಿದ್ಲು"

ಈ ಬಡತನ ಎಂಬುದು ಎಂಥ ವ್ಯಕ್ತಿಯನ್ನು ಮುಟ್ಟದೇ ಬಿಡಲಾರದು. ಇವರ ಪರಿಸ್ಥಿತಿಯನ್ನು ನೋಡಿದರೆ ವ್ಯಕ್ತಿಗಳಿಗೆ ಮನಕರಗದೇ ಇರಲಾರದು. ಇಂಥ ಕಷ್ಟದಲ್ಲಿ ಜೀವನ ಸಾಗಿಸುತ್ತಿರುವ ಪೀಳಿಗೆ ಇಂದೂ ಸಹ ನಮ್ಮ ಸಮಾಜದಲ್ಲಿ ಕಾಣಬಹುದಾಗಿದೆ.

ಆತ್ಮಕತೆಗಳಲ್ಲಿ ಬಾಲ್ಯದ ನೆನಪುಗಳ ಸುರಿಮಳೆ ಇರುತ್ತದೆ. ಇಂಥ ಒಂದು ನೆನಪಿನಿಂದ ಹಸಿವು ಎಂಬುದು ಎಂಥ ಶ್ರೀಮಂತ ವ್ಯಕ್ತಿಯು ತಾನು ಬದುಕಲು

---

೧. ಮಣೆಗಾರ, ಪು. ೫

ಹಸಿವನ್ನು ತೀರಿಸಿಕೊಳ್ಳುವುದರಿಂದ ಸಾಧ್ಯವೆಂಬುದನ್ನು ಮರೆಯುವಂತಿಲ್ಲ ಆತ್ಮಕಥನಾಕಾರರು ತಮ್ಮ ಬಾಲ್ಯದಲ್ಲಿ ಶಾಲೆಯಿಂದ ಬಂದವನಿಗೆ ಊಟ ಇಲ್ಲದ ಸ್ಥಿತಿಯನ್ನು ಕಂಡು ಬಡತನ ಮತ್ತು ಹಸಿವಿನಿಂದ ತೊಳಲಾಡುವ ಜನ ಎಂತ ಕಾರ್ಯ ಮಾಡುತ್ತಾರೆಂಬುದು ಒಂದು ನಿದರ್ಶನದ ಮೂಲಕ ನಾವು ನೋಡಬಹುದಾಗಿದೆ.

"ನಮ್ಮ ಹಟ್ಟಿಯ ಸ್ವಲ್ಪ ದೂರದಲ್ಲೇ ವಡ್ಡರ ವೆಂಕಟಪ್ಪನ ಹೊಲ ಅವರ ಹೊಲ ಸ್ವಲ್ಪ ತಗ್ಗಿನಲ್ಲಿತ್ತು. ಕೂತರೆ ಯಾರಿಗೂ ಕಾಣಿಸುತ್ತಿರಲಿಲ್ಲ. ಸೀದಾ ಹೋದವನೆ ಕೊನೆ ಸೀಳಿನಲ್ಲಿ ಕುಳಿತುಕೊಂಡು ಗಿಡದಲ್ಲಿದ್ದ ಕಡ್ಲೆಕಾಯನ್ನು ಒಂದೊಂದೆ ದೊಗೆದು ತಿನ್ನಲು ಮುಂದಾದೆ. ಆಗ ನನಗಿದ್ದ ಹಸಿವು ಸುತ್ತಲಿದ್ದುದನ್ನೆಲ್ಲಾ ಮರೆಸಿತ್ತು."[೧]

ಅಂದರೆ ಇಲ್ಲಿ ಹಸಿವಿನ ದಾರುಣತೆಯನ್ನು ನಾವು ಕಾಣಬಹುದು ತಾನು ಮಾಡಿದ್ದು ತಪ್ಪು ಎಂದು ಅರಿವಾದಾಗ ವ್ಯಕ್ತಿಗಳಿಗೆ ಸಂಕೋಚ ಹುಟ್ಟುವುದು ಸಹಜ. ಇಂಥ ಮನಸ್ಥಿತಿಯ ವ್ಯಕ್ತಿ ರಾಮಯ್ಯನವರು. ಹೀಗೆ ಮಾಡಿದ ಜನರಿಗೆ ತಳಮಳ, ನಿದ್ರೆ, ಬರದೆ ಇರುವುದನ್ನು ನಾವು ಕಾಣಬಹುದು. ಒಳ್ಳೆಯ ಮನಸ್ಸನ್ನುಳ್ಳವರ ಸಮೂದಾಯದ ಅರಿವನ್ನು ಹೊಂದಿದವರಿಗೆ ಮಾತ್ರ ಇಂತಹ ಚಿಂತೆ ಬರುವುದು ಸಹಜ.

ಬಡತನ ಮತ್ತು ಹಸಿವಿನ ಬಗ್ಗೆ ರಾಮಯ್ಯನವರ ಧೋರಣೆ ಭಿನ್ನವಾಗಿದೆ. ಅಂದರೆ ಇಂತಹ ಪ್ರಸಂಗಗಳನ್ನು ಮೇಲುಧನಿಯಲ್ಲಿ ಹೇಳಲು ಹೋಗುವುದಿಲ್ಲ. ಸೌಮ್ಯಸ್ವಭಾವದಿಂದ ಇಡೀ ಸಮಾಜವನ್ನು ಕಾಣುವುದು ಅವರ ದೊಡ್ಡ ಮನಸ್ಸಾಗಿದೆ. ಎಲ್ಲಾ ಇದಕ್ಕೆ ಸಂಬಂಧಿಸಿದಂತೆ ಸಮಾಜವನ್ನು ನಿಂದಿಸುವ ಪ್ರಕ್ರಿಯೆಯನ್ನು ಇವರು ಮಾಡಿಲ್ಲ ಎಂಬುದು ಸಾಹಿತ್ಯಕ್ಕೆ ಹೊಸ ಮೌಲ್ಯವನ್ನು ಕೊಟ್ಟಂತಾಗಿದೆ.

"ಈ ಆತ್ಮಕತೆಯಲ್ಲಿ ನಮ್ಮನ್ನು ಮೆಲ್ಲಗೆ ಮನದಾಳಕ್ಕೆ ಇಳಿಸುತ್ತದೆ. ಇಲ್ಲಿ ಅಸ್ಪೃಶ್ಯನೊಬ್ಬ ತನ್ನ ಕಥೆಯನ್ನು ಹೇಳುತ್ತಿದ್ದರೂ ಆತ್ಮ ಮರುಕ ಹೆಚ್ಚಿಗೆ ಇಲ್ಲದಿರುವುದರಿಂದ ಮಕ್ಕಳಾಗದಂತೆ ಅಪರೇಷನ್ ಮಾಡಿಸಿಕೊಂಡರೆ ಹಣಕೊಡುತ್ತಾರೆಂಬ ಆಸೆಯಿಂದ ಆಪರೇಷನ್ ಮಾಡಸಿಕೊಂಡ ಅಪ್ಪ ಆಸ್ಪತ್ರೆಯ ಊಟವನ್ನು ಮನೆ ಮಂದಿಯ ಜೊತೆ ಹಂಚಿಕೊಳ್ಳಲು ತಂದ ಪ್ರಸಂಗ ಕೂಡ

---

೧. ಲಂಕೇಶ್ ಪತ್ರಿಕೆ, ಮಾರ್ಚ್ ೨೨, ೨೦೦೦.

ಲೇಖಕರು ನಿರ್ಲಿಪ್ತ ಮನಸ್ಥಿತಿಯಿಂದ ನೋಡುವುದು ಕಾಣುತ್ತದೆ. ಅಂದರೆ ತಾವು ಒಂದು ಹೊತ್ತಿನ ಊಟಕ್ಕೆ ಪರದಾಡುತ್ತಾ ತಾವು ಓದಿದ್ದನ್ನು ಗೊಣಗದೆ ದಾಖಲಿಸಬಲ್ಲರು."[೧]

ಹೀಗೆ ತಮ್ಮ ಜನಾಂಗದ ಯಾತನೆಯ ಜೊತೆ ಜೊತೆಗೆ ಹಳ್ಳಿಯಲ್ಲಿ ಅಸ್ಪೃಶ್ಯರೂ ಉಳಿದ ಸ್ಪೃಶ್ಯ ಜಾತಿಯವರೂ ಬಡತನ ಕಡುಬಡತನಗಳ ನಡುವೆ ಇದ್ದರೆಂಬುದನ್ನು ರಾಮಯ್ಯನವರು ತಮ್ಮ ಬಾಲ್ಯದಲ್ಲಿ ಕಂಡುಕೊಂಡರು.

ದಲಿತ ಸಮುದಾಯದಲ್ಲಿ ಮತ್ತು ಗ್ರಾಮೀಣ ಪ್ರದೇಶದ ಜನತೆಯ ಸ್ಥಿತಿಯನ್ನು ಹೇಳುತ್ತಾ ಹಳ್ಳಿಯರ ಚಪ್ಪಲಿಗಳನ್ನು ರಿಪೇರಿ ಮಾಡುವುದೆಂದರೆ ಅದಕ್ಕಿಂತ ರಣಹಿಂಸೆ ಮತ್ತೊಂದಿಲ್ಲ ಎನ್ನುತ್ತಾರೆ. ಜೊತೆಗೆ ಕೆಲವು ಚಪ್ಪಲಿಗಳಿಗೆ ಟಾಕಾ ಹಾಕಲು ಅಥವಾ ಮೊಳೆ ಹೊಡೆಯಲು ಒಂದು ರಾಗಿ ಕಾಳಿನಷ್ಟು ಜಾಗವಿರದೆ ಕಿತ್ತು ಹೋಗಿರುತ್ತಿದ್ದವು. ಅವು ಬಡತನವನ್ನು ಪ್ರತಿಬಿಂಬಿಸುತ್ತದೆ. ಇದ್ದಷ್ಟೇ ಅಲ್ಲಾ ಒಂದೇ ಕಾಲಿನ ಎರಡು ಚಪ್ಪಲಿಗಳನ್ನು ಧರಿಸುತ್ತಿರುವುದು, ತನ್ನ ಜೊತೆಯಲ್ಲದ ಬೇರೆ ಬೇರೆ ಒಂದೊಂದು ಚಪ್ಪಲಿಗಳನ್ನು ಬಿಡುವರು ದಲಿತರು ಬಳಸುತ್ತಿದ್ದರು. ಇದೆಲ್ಲಾ ದಲಿತ ಸಮಾಜದ ಬಡತನವನ್ನು ಧ್ಯಾನಿಸುವ ಒಂದೊಂದು ನಿದರ್ಶನಗಳು.

ಅಸ್ಪೃಶ್ಯತೆಯೆಂಬುದು ನಮ್ಮ ಸಮಾಜದಲ್ಲಿ ಸಾವಿರಾರು ವರ್ಷಗಳ ಹಿಂದಿನಿಂದಲೂ ಬೆಳೆದುಬಂದ ಒಂದು ಸಾಮಾಜಿಕ ಪಿಡುಗು. ಇದು ರಾಮಯ್ಯ ಅವರಂತಹ ವ್ಯಕ್ತಿಯನ್ನು ಬಿಟ್ಟಿಲ್ಲವೆಂಬುದನ್ನು ನಾವಿಲ್ಲಿ ಕಾಣಬಹುದಾಗಿದೆ.

"ನಮ್ಮೂರು ತುಂಬಾಡಿ ಗೊಲ್ಲಹಳ್ಳಿಯ ಬೆನ್ನಿಗೆ ಇರುವ ಅಡ್ಡಗೆರೆ ವೀರನಾಗಮ್ಮನ ಗುಡಿಯಳಕ್ಕೆ ನಮ್ಮ ಮಣೆಗಾರ ಜಾತಿಯವರಿಗೆ ಇವೊತ್ತಿಗೂ ಪ್ರವೇಶವಿಲ್ಲ. ಅಂದರಂತೆಯೇ ಬುಕ್ಕಾ ಪಟ್ಟಣದ ದೊಡ್ಡಮ್ಮ ಗುಡಿಗೂ ಮಣೆಗಾರರಿಗೆ ಪ್ರವೇಶವಿಲ್ಲ."[೨] ಅಂದರೆ ಗುಡಿಗೆ ಪ್ರವೇಶವಿಲ್ಲ ಎಂಬುದು ಕನಕದಾಸರನ್ನು ಸಹ ಗುಡಿಯೊಳಕ್ಕೆ ಪ್ರವೇಶಿಸಲು ಬಿಡಲಿಲ್ಲ. ಆದರೆ ಇಂತಹ ವೈಜ್ಞಾನಿಕವಾಗಿ ಮುಂದುವರೆದಿರುವ ನಾಡಿನಲ್ಲಿ ಈ ರೀತಿಯ ಅಸ್ಪೃಶ್ಯತೆಯನ್ನು ಕಾಣುವುದು ಒಂದು ಮೌಢ್ಯವೆಂದು ಹೇಳಬಹುದು. ಪ್ರಕೃತಿ ಸಹಜ ವಸ್ತುಗಳ ಮೇಲೂ ಅಸ್ಪೃಶ್ಯತೆಯೆನ್ನುವ

---

೧. ಮಣೆಗಾರ, ಪು. ೭.
೨. ಅದೇ, ಪು. ೨೪.

ಪಟ್ಟವನ್ನು ಕಟ್ಟವುದು ಎಷ್ಟು ಯೋಗ ಅನಿಸುತ್ತದೆ. ದಲಿತರನ್ನು ಅರ್ಥಾತ್ ಬಡವರನ್ನು ಅಸ್ಪೃಶ್ಯರೆಂದು ಗುರ್ತಿಸುತ್ತಿರುವುದು ಅದಾವ ನ್ಯಾಯ? ಇದಕ್ಕೆ ರಾಮಯ್ಯನವರು ದಾಖಲಿಸುವ ಪ್ರಸಂಗ ಮುಖ್ಯವಾಗುತ್ತದೆ.

“ನಮ್ಮ ಹಳ್ಳಿಯಲ್ಲಿದ್ದ ಜೈನರ ಪಾರ್ಶ್ವನಾಥಪ್ಪ ಮತ್ತು ಜೋತ್ಯಮ್ಮನವರ ಮನೆಗಳಲ್ಲಿದ್ದ ಅಂಗಡಿಗಳಿಗೆ ನಾವು ಸಾಮಾನುಕೊಳ್ಳಲು ಹೋದರೆ ಅವರು ತೊಣಚಿ ಹತ್ತಿದ ಹಸು ಎಗರಾಡುವಂತೆ ನಮ್ಮನ್ನು ನೋಡಿದ ಕೂಡಲೇ ಎಗರಾಡುತ್ತಿದ್ದವರು ಎದ್ದು ಓಡಾಡಲಾರದಷ್ಟು ಸ್ಥೂಲ ದೇಹಿಯಾಗಿದ್ದ ಜ್ಯೋತ್ಯಮ್ಮನವರ ತಾಯಿ ಸಿರಿದೇವಮ್ಮನವರು ತಾವು ಕುಳಿತಿದ್ದ ಸ್ಥಳದಿಂದಲೇ ಒಂದು ಉದ್ದನೆಯ ಬಿದಿರು ಕೋಲಿಗೆ ತಟ್ಟೆಯನ್ನು ಸಿಕ್ಕಿಸಿ ಕೂತಲ್ಲಿಂದಲೇ ಕಿಟಕಿಯಲ್ಲಿ ನಿಂತಿರುತ್ತಿದ್ದ ನಮಗೆ ವ್ಯಾಪಾರ ಮಾಡುತ್ತಿದ್ದರು.”[೧]

ಅಂಗಡಿಯ ಸಾಮಾನಿನ ವ್ಯಾಪರದಲ್ಲಿಯೂ ಮಡಿಮೈಲಿಗೆ ಇದೇ ಎನ್ನುವುದಾದರೆ ಇನ್ಯಾವ ನೆಲೆಯಲ್ಲಿ ಅಸ್ಪೃಶ್ಯತೆಯನ್ನು ಆಚರಿಸದೇ ಇರುತ್ತಾರೆ? ಅಸ್ಪೃಶ್ಯತೆ ಎಂಬ ಗಾಢಾಂಧಕಾರದಲ್ಲಿ ತಡವರಿಸುತ್ತಿರುವ ಭಾರತೀಯರು ಎಂದು ಚಲನಶೀಲತೆಯೆಡೆಗೆ ಮುಖಮಾಡಿಯಾರು?

ಇಂದಿನ ಕಾಲದಲ್ಲಿ ಕೆಲವೊಂದು ಹಳ್ಳಿಯಲ್ಲಿ ಈ ರೀತಿಯ ಆಚರಣೆಯನ್ನು ಆಚರಿಸುತ್ತಿದ್ದಾರೆ. ಅಕ್ಷರ ಜ್ಞಾನವಿಲ್ಲದ ಅನಾಗರಿಕ ಸಂಸ್ಕೃತಿಯ ಈ ಜನ ತಲೆಮಾರು ಸುಧಾರಿಸಿಕೊಳ್ಳುವ ಅವಶ್ಯಕತೆಯಿದೆ. ವಿದ್ಯಾವಂತರು ಪಟ್ಟಣಗಳಲ್ಲಿ ಅಷ್ಟಾಗಿ ಆಚರಿಸುತ್ತಿಲ್ಲ. ಅದೇನೇ ಇರಲಿ ಹುಟ್ಟು ಗುಣ ಸುಟ್ಟರೂ ಹೋಗುವುದಿಲ್ಲ ಎಂಬಂತಾಗಿದೆ.

ರಾಮಯ್ಯನವರು ತಮ್ಮ ಬಾಲ್ಯದಲ್ಲಿ ದೇವರು ಎಂದರೆ ಬಹಳ ಗೌರವದಿಂದ ಕಾಣುತ್ತಿದ್ದರು. ಅಸ್ಪೃಶ್ಯತೆಯ ಕರಾಳ ಛಾಯೆಯನ್ನು ಗುರ್ತಿಸಿ ಹೇಳುವುದು ಈ ಕೆಳಗಿನ ಸಾಲುಗಳು ಮುಖ್ಯವಾಗುತ್ತದೆ.

“ನಮ್ಮೂರ ಗುಡಿಯನ್ನು ಕಟ್ಟಿದೋರು ಯಾರಣ್ಣ
ಕಟ್ಟಿದ ನಮ್ಮನ್ನೆಲ್ಲಾ ಹೊಲೆಮಾದಿಗ್ರಂತಾರೆ

---

೧. ಮಣೆಗಾರ, ಪು. ೬೧.

ನಾವೇ ಕಟ್ಟಿದಾ ಗುಡಿಗೆ ನಾವೇ ಹೋಗಂಗಿಲ್ಲ

ಯಾಕಂತ ಕೇಳಿದ್ರ ನೀವು ಹೊಲೆಮಾದಿಗರೆಂತಾರೆ"[೧]

ಈ ರೀತಿ ಪ್ರಚಾರದ ಹಾಡನ್ನು ದಾಖಲಿಸುತ್ತಾರೆ. ದಲಿತರಿಗೆ ದೇವಸ್ಥಾನದ ಪ್ರವೇಶ ದೊರಕಿಲ್ಲ, ದೊರಕಿದರೆ "ಬಡವರಿಗೆ ನಿಧಿ ಸಿಕ್ಕಂತೆ" ಆದರೆ ಇಂತಹ ಪ್ರಸಂಗ ರಾಮಯ್ಯನವರ ಬದುಕಿನಲ್ಲಿ ಆಗಿರುವುದು ಕಂಡುಬರುತ್ತದೆ.

ಜಾತೀಯತೆಯನ್ನು ನಾವು ಇಲ್ಲಿ ತೀವ್ರವಾದ ರೀತಿಯಲ್ಲಿ ಕಾಣಲು ಅವಕಾಶವಿದ್ದು ಒಂದೇ ಒಂದು ಪ್ರಸಂಗ ತನ್ನ ಅಣ್ಣನ ಸಾವಿನ ಸುದ್ದಿಯನ್ನು ತಿಳಿದ ರಾಮಯ್ಯ ಅವರ ಶಾಲೆಯಲ್ಲಿ ಇವರ ಅಣ್ಣ ಬಹಳ ಹೆಸರುವಾಸಿಯಾದ ವ್ಯಕ್ತಿಯಾಗಿದ್ದರು. ಇಂಥ ವ್ಯಕ್ತಿಯನ್ನು ಮುಂದೆ ಬರಲು ಬಿಡಬಾರದೆಂಬ ಮನಸ್ಥಿತಿಯ ಶಿಕ್ಷಕರು ಇದ್ದರೆಂದು ದಾಖಲಿಸುತ್ತಾರೆ. ತನ್ನ ಅಣ್ಣನು ಫೇಲಾಗುತ್ತಿದ್ದ ಸಂಗತಿ ಮನೆಯಲ್ಲಿ ತಿಳಿಯುತ್ತಿರಲಿಲ್ಲ. "ಇದಕ್ಕೆ ಕೆಲವು ಜಾತಿವಾದಿ ಶಿಕ್ಷಕರ ಕರಾಮತ್ತೆಂದು ತಿಳಿದಿದ್ದ ಅಣ್ಣ ಒಳಗೊಳಗೆ ಬಯ್ಯುತ್ತಿದ್ದ. ಆದರೂ ಅವನು ಅಸಹಾಯಕನಾಗಿದ್ದ."[೨]

ದಲಿತರನ್ನು ಯಾವ ಯಾವ ರೀತಿಯ ಚಿತ್ರಹಿಂಸೆಯ, ಮಾನಸಿಕ ಯಾತನಾಮಯ ಮಾನದಂಡಗಳ ಸಹಾಯದಿಂದ ಹಿಂದೆ ಹಾಕಲು ಪ್ರಯತ್ನಿಸುತ್ತಿದ್ದರು. ಕಲಿಯುವ ವಿದ್ಯೆಯಾರಪ್ಪನ ಸ್ವತ್ತಲ್ಲ, ಶಕ್ತಿ ಇರುವಾತ ಸಂಪಾದಿಸುತ್ತಾನೆ, ಗಳಿಸುತ್ತಾನೆ. ಆದರೆ ಈ ಜಾತ್ಯಂಧ ಸವರ್ಣೀಯರ ಕುಮ್ಮಕ್ಕಿನಿಂದ ಬೆಳೆಯಬೇಕಿದ್ದ, ಬೇಕಾಗಿದ್ದ ಚಿಗರುಗಳೆಲ್ಲ ಬಾಡಿಹೋಗಲು ಈ ರೀತಿಯ ಅಂಶಗಳೇ ಕಾರಣವಾಗಿರುತ್ತವೆ. ಆದರೆ ರಾಮಯ್ಯನವರು ಈ ಘಟನೆಯನ್ನು ಅಷ್ಟಕ್ಕೆ ಹೇಳಿ ಯಾವ ರೀತಿಯ ಆಕ್ರೋಶ ಭಾವನೆಯನ್ನು ಅಭಿವ್ಯಕ್ತಪಡಿಸದೆ ಇರುವುದು ಗೋಚರಿಸುತ್ತದೆ.

"ಅಸ್ಪೃಶ್ಯತೆಯನ್ನು ಆಚರಿಸುವ ಘೋಷಿಸುವ ಜಾತಿಗಳ ವಿರುದ್ಧ ಕೂಡ ರಾಮಯ್ಯನವರು ತೀರ ಕಹಿಯಾಗಲಾರರು. ಇದಕ್ಕೆ ತುಂಬಾಡಿ ಗ್ರಾಮದ ಸುತ್ತಲಿನ ಪರಿಸರದಲ್ಲಿ ಇದ್ದ ವಿಚಿತ್ರ ಸಾಮರಸ್ಯವೂ ಕಾರಣವಿರಬಹುದು. ದಲಿತರ ಮೇಲೆ ಹಲ್ಲೆ

---

೧. ಮಣೆಗಾರ, ಪು. ೭.
೨. ಲಂಕೇಶ್ ಪತ್ರಿಕೆ, ಮಾರ್ಚ್, ೨೨, ೨೦೦೦.

ಎಂಬುದಕ್ಕೆ ಕೇಳರಿಯದ ಊರು ತುಂಬಾಡಿ. ಒಂದೂ ಮುಸ್ಲಿಂ ಕುಟುಂಬದಿಂದ ಈ ಊರಿನಲ್ಲಿ ಬಾಬಯ್ಯನ ಜಾತ್ರೆಯನ್ನು ಎಲ್ಲಾ ಜನಾಂಗದವರೂ ಆಚರಿಸುತ್ತಾರೆ. ಈ ಹಳ್ಳಿಯಲ್ಲಿ ಲಿಂಗಾಯಿತರು ಮತ್ತು ಜೈನರನ್ನು ಬಿಟ್ಟರೆ ಉಳಿದೆಲ್ಲಾ ಜಾತಿಗಳು ಪರಸ್ಪರ ಎಲ್ಲರನ್ನೂ ಅಣ್ಣ, ತಮ್ಮ, ತಂಗಿ, ಚಿಕ್ಕಪ್ಪ, ತಾತ, ಅತ್ತೆ ಎಂದೇ ಸಂಭೋದಿಸುತ್ತಾರೆಂದು ರಾಮಯ್ಯನವರು ಬರೆಯುತ್ತಾರೆ."[೧]

"ಇಲ್ಲಿ ಕುರುಬ ಜಾತಿಗೆ ಸೇರಿದ ಬೀರಯ್ಯ ಮತ್ತು ಹೆಂಡತಿ ಮುತ್ತಮ್ಮ, ಪುಟ್ಟರಂಗಯ್ಯ, ನರಸಮ್ಮನವರು ಸಂಪ್ರದಾಯದಂತೆ ನನ್ನನ್ನು ಅಳಿಯಾ ಎಂದು ಕೂಗುತ್ತಿದ್ದರು" ಎಂದು ಹೇಳಿಕೊಂಡಿದ್ದಾರೆ. ಅಂದರೆ ಜಾತೀಯತೆ ಎಂಬುದು ಇವತ್ತಿನ ಕಾಲಕ್ಕೆ ಸ್ವಲ್ಪ ಮಾಸಿ ಹೋಗುತ್ತಿರುವುದನ್ನು ಕಾಣಬಹುದು. ಆದರೂ ಕೂಡ ಮದುವೆಯಂತಹ ಸಮಾರಂಭಗಳು ಜರುಗುತ್ತಿರುವುದು ಜಾತಿಯ ಒಳಗಡೆಯೇ ಆಗಿರುತ್ತದೆ.

"ಇಂಥ ಪ್ರಸಂಗಗಳನ್ನು ವೈಭವೀಕರಿಸಿ ತಮ್ಮ ಸುತ್ತಲೂ ಅಸ್ಪೃಶ್ಯತೆ ಇಲ್ಲವೆಂಬುದೇನೂ ಸೂಚಿಸುವುದಿಲ್ಲ. ಅಂದರೆ ಮುಖ್ಯವಾಗಿ ಜೈನರ ಅಂಗಡಿಗೆ ಹೋದರೆ ಅವರು ಕೈಯಿಂದ ಸಾಮಾನು ನೀಡದೆ ಉದ್ದನೆಯ ಕೋಲಿನಿಂದ ವ್ಯಾಪಾರ ಮಾಡುತ್ತಿದ್ದರು ಎಂದು ದಾಖಲಿಸುತ್ತಾರೆ. ಜಾತೀಯತೆಯ ಸೋಗನ್ನು ತಮ್ಮ ಮೆಲ್ಲನೆಯ ಮಾತುಗಳಿಂದ ಹೇಳುವಲ್ಲಿ ನಮಗೆ ಇವರು ವಿಶಿಷ್ಟವಾಗುತ್ತಾರೆ."[೨]

ಆದರೆ ಈ ಬಗೆಯ ಅನುಭವದ ನಡುವೆಯೇ ಸವರ್ಣೀಯರು ತಮ್ಮ ನರಕವನ್ನು ಬೀರುವ ಉದಾತ್ತವಾದ ಬಗೆಗಳನ್ನು ಇಲ್ಲಿ ನೆನೆಯುವಂತಹ ಪ್ರಸಂಗವನ್ನು ಕಾಣಬಹುದು. "ವಡ್ಡಗೆರೆಯಲ್ಲಿ ಒಕ್ಕಲಿಗರ ಹುಲಿಯಪ್ಪಜ್ಜ ಎಂಬುವವರು ಊರುಗೋಲು ಹಿಡಿದು ಮಕ್ಕಳಿಗೆಲ್ಲ ಸಮಾನವಾಗಿ ಉಪ್ಪಿಟ್ಟು ಹಂಚುವಂತೆ ನೋಡಿಕೊಳ್ಳುತ್ತಿದ್ದರು. ಹುಲಿಯಪ್ಪಜ್ಜನಿಗೆ ಮಕ್ಕಳ ಮೇಲೆ ಪ್ರೀತಿ ಎಷ್ಟಿತ್ತೆಂದರೆ ಮನೆಯಲ್ಲಿ ತನಗೆ ಕೊಟ್ಟಿದ್ದ ರೊಟ್ಟಿಯನ್ನು ತಿನ್ನದೆ ಬಟ್ಟೆಯಲ್ಲಿ

೧. ಲಂಕೇಶ್ ಪತ್ರಿಕೆ, ಮಾರ್ಚ್, ೨೨, ೨೦೦೦.
೨. ಮಣೆಗಾರ, ಪು. ೪೪

ಮುಚ್ಚಿಟ್ಟುಕೊಂಡು ಬಂದು ಹೊಲೆಮಾದಿಗರ ಹಟ್ಟಿಯ ಬಳಿ ನಿಂತು ಮಕ್ಕಳನ್ನು ಕರೆದು ರೊಟ್ಟಿ ಹಂಚುತ್ತಿದ್ದರು." ೧

ಮನುಷ್ಯ, ಮನುಷ್ಯನನ್ನು ಮಾನವೀಯ ನೆಲೆಯಲ್ಲಿ ಪ್ರೀತಿಸುವ ಜನ ಬೆರಳೆಣಿಕೆಯಷ್ಟಾದರೂ ಇದ್ದಾರೆ ಅದು ಅತ್ಯಂತ ಒಳ್ಳೆಯ ಸಂಗತಿ ಎಲ್ಲರೂ ಕೂಡ ದಲಿತರನ್ನು, ಅಸ್ಪೃಶ್ಯರನ್ನು ಕಂಡರೆ ಹುಚ್ಚುನಾಯಿ ಕಡಿದವರಂತೆ ಆಡಿದರೆ ಸಮಾಜದಲ್ಲಿ ಗತಿ ಅಸ್ತವ್ಯಸ್ತವಾಗಿ ರೂಪಾಂತರವಾಗುತ್ತದೆ. ಆದ್ದರಿಂದಲೇ ಮನುಷ್ಯ ಮನುಷ್ಯನನ್ನು ಪ್ರೀತಿಸುವ, ಪೂಜಿಸುವ ಮಾನವೀಯ ಚೈತನ್ಯವನ್ನು ರೂಪಿಸಿಕೊಳ್ಳುವ ಅಗತ್ಯತೆ ಇದೆ. ಅಂದಿನ ಸಾಮಾಜಿಕ ಸ್ಥಿತಿಯಲ್ಲಿ ಇಂಥ ಒಂದು ಅನ್ಯೋನ್ಯತೆಯ ಭಾವವನ್ನು ಪ್ರಕಟಿಸಿ ತೋರಿಸಿದ್ದು ಅಂದಿನ ಸಮಾಜದ ಸ್ಥಿತಿಗೆ ಕನ್ನಡಿ ಹಿಡಿದಂತಾಗಿದೆ.

ದಲಿತ ಜನಾಂಗದ ಸ್ಥಿತಿಯಲ್ಲಿ ಶಿಕ್ಷಣ ಎನ್ನುವುದು ಒಂದು ರೀತಿಯ ಸುಲಭವಾದ ಮಾರ್ಗವಾಗಿರಲಿಲ್ಲ. ಅಂದರೆ ಬರಿ ಓದಿನ ಕಡೆಗೆ ಗಮನ ಹರಿಸಿದರೆ ಉಪವಾಸ ಇರಬೇಕಾದ ಸ್ಥಿತಿಯಲ್ಲಿಯೂ ತಮ್ಮ ಓದನ್ನು ಮುಂದುವರಿಸುವುದು ಒಂದು ದೊಡ್ಡ ಸಾಧನೆ. ಬಡತನದ ಬೇಗೆಯಲ್ಲಿರುವ ದಲಿತ ಜನಾಂಗದ ಸ್ಥಿತಿಯಲ್ಲಿ ಶಿಕ್ಷಣ ಎನ್ನುವುದು ಕಬ್ಬಿಣದ ಕಡಲೆಯಂತೆ ಇರುತ್ತಿತ್ತು. ಸಾಮಾನ್ಯವಾಗಿ ದಲಿತವರ್ಗದ ಜನರಲ್ಲಿ ಒಂದೇ ಉದ್ಯೋಗದಲ್ಲಿ ಸೀಮಿತವಾಗದೇ ಅದರ ಜೊತೆಗೆ ಬೇರೆ ಬೇರೆ ಕೆಲಸ ಕಾರ್ಯದಲ್ಲಿ ತೊಡಗಿಕೊಂಡು ಓದುವ ಕಾರ್ಯವನ್ನು ಕೈ ಬಿಡದ ಎಷ್ಟೋ ಜನ ದಲಿತ ಲೇಖಕರನ್ನು ನಾವು ಕಾಣಬಹುದು. ಬಡತನದಿಂದ ಬಂದ ವ್ಯಕ್ತಿಗಳು ದನ, ಕುರಿ, ಹಂದಿ ಮುಂತಾದವುಗಳ ಉಪಕಸುಬುಗಳನ್ನು ಮಾಡಿಕೊಂಡು ತಮ್ಮ ಮನೆಯ ಜೀವನ ನಡೆಸುವುದರೊಂದಿಗೆ ಓದನ್ನು ಮುಂದುವರೆಸಿ ಸಾಧಿಸಿ ತೋರಿಸುವುದು ಈ ಕೃತಿಯಲ್ಲಿ ಕಾಣುತ್ತದೆ.

ಸ್ವಾತಂತ್ರ್ಯದ ಉತ್ತರ ಭಾಗದಲ್ಲಿ ಬರಗಾಲ ಪರಿಸ್ಥಿತಿಗಳು ಕಾಣಿಸಿಕೊಂಡು ಇವು ವ್ಯಕ್ತಿ, ಪರಿಸರ, ಸಮಾಜದ ಮೇಲೆ ಕೆಟ್ಟ ಪರಿಣಾಮವನ್ನು ಬೀರಿದ್ದವು. ಅಂಥ ವೇಳೆಯಲ್ಲಿ ದಲಿತ ಜನಾಂಗ ಚೇತರಿಸಿಕೊಳ್ಳವುದು ಕಷ್ಟಸಾಧ್ಯವಾದ ಕೆಲಸವಾಗಿತ್ತು. ಇಂತಹ ಒಂದು ಬರಗಾಲದ ಪರಿಸ್ಥಿತಿ ರಾಮಯ್ಯನವರ ಬದುಕಿನಲ್ಲಿ ಕಾಣಿಸಿಕೊಂಡಿತ್ತು. ಇವರೇ ಹೇಳುವಂತೆ 'ಬಟಾಣಿಬರ' ಅನ್ನ ಸಿಗದ ಪರಿಸ್ಥಿತಿಯಲ್ಲಿ ಹೆಚ್ಚಾಗಿ ಸಿಗುತ್ತಿದ್ದ

೧. ಮಣೆಗಾರ, ಪು. ೪೪

ಬಟಾಣಿಯನ್ನು ತಿನ್ನುವಂತಹ ಸ್ಥಿತಿಗೆ ಅಂದಿನ ಗ್ರಾಮಗಳ ಪರಿಸ್ಥಿತಿ ಇತ್ತು ಎಂದರೆ ಇವತ್ತಿನ ಕಾಲದಲ್ಲಿ ಊಹಿಸಲು ಸಾಧ್ಯವಿಲ್ಲ. ಮನೆಗಳಲ್ಲಿ ಇದ್ದ ಜನತೆ ಊಟಕ್ಕೆ ಹಾಹಾಕಾರ ಮಾಡುವ ಸ್ಥಿತಿಯೂ ಇತ್ತು.

" ಆಗ ಮನೆಯಲ್ಲಿ ಒಂದು ಹೊತ್ತಿನ ಊಟಕ್ಕೂ ಗತಿಯಿರಲಿಲ್ಲ. ಆದ್ದರಿಂದ ಸ್ಕೂಲಿನಲ್ಲಿ ಕೊಡುತ್ತಿದ್ದ ಉಪ್ಪಿಟ್ಟನ್ನೇ ನಾನು ಬಲವಾಗಿ ನಂಬಿದ್ದೆ. ಸ್ಕೂಲಿನಲ್ಲಿ ಉಪ್ಪಿಟ್ಟು ಯಾವ ರೀತಿ ಮಾಡುತ್ತಿದ್ದರೆಂದರೆ, ಅದಕ್ಕೆ ಎಣ್ಣೆ ಈರುಳ್ಳಿಯ ವಾಸನೆಯನ್ನೂ ತೋರಿಸದೇ ಬರೀ ನೀರಿನಲ್ಲಿ ಮಾತ್ರ ಬೇಯಿಸಿ ಕೊಡುತ್ತಿದ್ದರು. ಅನೇಕ ಸಾರಿ ಹುಳುಗಳು ಸಿಗುತ್ತಿದ್ದವು. ಆದರೆ ಗತಿಯಿಲ್ಲದಿದ್ದರಿಂದ ನಿರ್ವಾಹವಿಲ್ಲದೆ ಹುಳುಗಳನ್ನು ತೆಗೆದು ಹಾಕಿ ತಿನ್ನುತ್ತಿದ್ದೆ."

ಇಂತಹ ಪರಿಸ್ಥಿತಿಯಲ್ಲಿ ರಾಮಯ್ಯನಂತವರು ಮುಂದೆ ದಲಿತ ಸಂಘರ್ಷ ಸಮಿತಿಯ ಕಾರ್ಯ ಕರ್ತನಾಗುವ ತನಕದ ಕಥೆಯಲ್ಲಿ ಸ್ವಾತಂತ್ರ್ಯೋತ್ತರ ದಲಿತ ವ್ಯಕ್ತಿಗಳ ಬೆಳವಣಿಗೆಯ ಕತೆಯು ಬೆರೆತು ಹೋಗುತ್ತದೆ. ಅನೇಕ ಲೇಖಕರಂತೆ ಇವರೂ ಕೂಡ ಬಾಲ್ಯದವರೆಗೆ ಗಾಢವಾಗಿ ಮಾತ್ರ ಬರೆದು ನಂತರದ ಕತೆ ಹೇಳುವಾಗ ಸುಮ್ಮನೆ ಓಡಿ ಹೋಗುತ್ತಾರೆ.

ದಲಿತ ಜನಾಂಗ ಹೋರಾಟವನ್ನು ಒಂದು ಅಸ್ತ್ರವಾಗಿ ಮಾಡಿಕೊಂಡರು. ಹೋರಾಟವೆಂದರೆ ಲೇಖನಿಯ ಮೂಲಕ ಜನತೆಯನ್ನು ಪ್ರಚೋದನೆಗೊಳಿಸುವುದು. ಇದರಿಂದ ಸ್ವಲ್ಪಮಟ್ಟಿನ ಕ್ರಾಂತಿಗೆ ನಾಂದಿ ಹಾಡಿದಂತೆ ಇಂದಿನ ದಲಿತ ಸಾಹಿತ್ಯ ಕಾಣುತ್ತಿದೆ.

ದಲಿತ ವ್ಯಕ್ತಿಗಳು/ಜನರು ಕ್ರಾಂತಿ ಹೋರಾಟಕ್ಕೆ ಇಳಿಯಲು ಅಲ್ಲಿಯ ಸಮಾಜದಲ್ಲಿರುವ ವ್ಯವಸ್ಥೆ ಮುಖ್ಯ ಕಾರಣವಾಗುತ್ತದೆ. ವ್ಯವಸ್ಥೆ ಚೆನ್ನಾಗಿದ್ದರೆ ಮಾತ್ರ ಹೋರಾಟಕ್ಕೆ ಆಸ್ಪದವಿರುವುದಿಲ್ಲ. ಆದರೆ ಅನಿವಾರ್ಯವಾಗಿ ವ್ಯಕ್ತಿಗಳನ್ನು ಹೋರಾಟಕ್ಕೆ ಪರೋಕ್ಷವಾಗಿ ಸಮಾಜವೇ ಸೃಷ್ಟಿಸುತ್ತದೆ.

ಈ ಆತ್ಮಕತೆಯಲ್ಲಿ ರಾಮಯ್ಯನವರು ಹೋರಾಟಗಾರರಾಗಿ ರೂಪುಗೊಳ್ಳಲು ತಮ್ಮ ವಿದ್ಯಾಭ್ಯಾಸದ ಸಂದರ್ಭಗಳು ಇವರ ಮೇಲೆ ಬಹಳ ಪ್ರಭಾವ ಬೀರಿರುವುದನ್ನು ಕಾಣಬಹುದು. ತಾವು ಬಾಲ್ಯದಲ್ಲಿ ಹಾಸ್ಟೆಲ್ ಸೇರಿದ್ದು, ಅಲ್ಲಿಯ ಅವ್ಯವಸ್ಥೆಯನ್ನು ಕಂಡಿದ್ದರಿಂದ ಹೋರಾಟಕ್ಕೆ ತೊಡಗಲು ಪ್ರವೃತ್ತಿ ಕಾಣಿಸಿಕೊಳ್ಳುತ್ತದೆ.

ಅಂದಿನ ಸಮಾಜದಲ್ಲಿ ನಡೆಯುತ್ತಿದ್ದ ದಲಿತರ ಮೇಲಿನ ದೌರ್ಜನ್ಯವನ್ನು ತಡೆಯಲು ವ್ಯಕ್ತಿಗಳು ದಲಿತ ಸಂಘರ್ಷ ಸಮಿತಿಯನ್ನು ಪ್ರಾರಂಬಿಸಿದ್ದರು. ಆದರೆ ತುಮಕೂರಿನ ಪ್ರಾಂತ್ಯದಲ್ಲಿ ಇದರ ನೇತಾರನಾಗಿ ಕಾರ್ಯ ನಿರ್ವಹಿಸುವ ರಾಮಯ್ಯನಂಥ ವ್ಯಕ್ತಿ ಸೇರಿರುವುದು ವ್ಯವಸ್ಥೆ ಎಂತಹ ವ್ಯಕ್ತಿಗಳನ್ನು ಏನುಬೇಕಾದರೂ ಮಾಡಬಹುದೆಂಬುದಕ್ಕೆ ಈ ಕಥನಕಾರರು ನಿದರ್ಶನವಾಗಿ ನಮಗೆ ಕಾಣಿಸುತ್ತಾರೆ.

ರಾಮಯ್ಯನವರು ತಮ್ಮ ಬಾಲ್ಯದಲ್ಲಿ ಕಂಡುಂಡಂತಹ ಸ್ಥಿತಿಗಳನ್ನು ದಾಖಲಿಸುವುದರಲ್ಲೂ ಒಂದು ವಿಶಿಷ್ಟತೆಯನ್ನು ಮೆರೆದಿದ್ದಾರೆ. ತಾವು ಯಾವುದಕ್ಕೂ ಮನಸ್ಸನ್ನು ಕಹಿ ಮಾಡಿಕೊಳ್ಳದೇ ಬಹಳ ನಿರಾಳವಾಗಿ ಸಮಾಜವನ್ನು ನೋಡುವ ಸ್ಥಿತಿ ಕಾಣುತ್ತದೆ. ಅನುಭವಿಸಿದ ನೋವುಗಳಿವೆ ಪ್ರತಿಕಾರವಾಗಿ ಯಾವುದೇ ದ್ವೇಷ, ರೊಚ್ಚು ಮುಂತಾದ ಪ್ರತಿಭಟನೆಯ ಧ್ವನಿಗಳನ್ನು ಆಡದೆ ತಮ್ಮ ಬರಹದ ಶೈಲಿಯನ್ನು ರೂಢಿಸಿಕೊಂಡಿರುವುದು ಒಬ್ಬ ನುರಿತ ಲೇಖಕರಿಗೆ ಸಾಧ್ಯವೆಂಬಂತೆ ಕಾಣಿಸಿಕೊಂಡಿದ್ದಾರೆ. ಸಾಹಿತ್ಯದ ಪಾದಾರ್ಪಣೆ ಇಲ್ಲಿಂದ ಪ್ರಾರಂಭವಾಗುತ್ತದೆ. ಆದರೂ ಯಾವುದೇ ವಿವಾದಕ್ಕೆ ಆಸ್ಪದ ನೀಡದಂತೆ ತಮ್ಮ ಬರವಣಿಗೆಯಲ್ಲಿ ಯಶಸ್ವಿಯಾಗಿದ್ದಾರೆ.

"ತಮ್ಮನ್ನು ಕಂಡರೆ ತೋಣಚಿ ಹತ್ತಿರ ಹಸು ಎಗರಾಡುವಂತೆ ಎಗರಾಡುವ ಜೈನರ ಪ್ರಸಂಗ, ದೇವಸ್ಥಾನದ ಪ್ರವೇಶ ನಿಷೇಧ ಪ್ರಸಂಗ ಮಣೆಗಾರರಿಗೆ ಮತ್ತು ಹೊಲೆಯರಿಗೆ ಪ್ರತ್ಯೇಕ ಬಾವಿಗಳಿರುವ ಸಂದರ್ಭ, ಹೊಲೆಯರ ಹೆಂಗಸರು ಮಣೆಗಾರರ ಹಟ್ಟಿಗೆ ಕೂಲಿ ಆಳುಗಳನ್ನು ಕರೆಯಲು ಬರುವಾಗ ಕೆಂಡದ ಮೇಲೆ ನಡೆದು ಬರುವಂತೆ ಮಡಿಮೈಲಿಗೆಯ ಭಾವದಿಂದ ಬಂದು ಹೋಗುತ್ತಿದ್ದರು." ಎಂಬ ಇತ್ಯಾದಿ ಘಟನೆಗಳು ಮಣೆಗಾರ ಆತ್ಮಕತೆಯಲ್ಲಿ ಅತ್ಯಂತ ಗಂಭೀರವಾದ ಚಿಂತನೆಗಳಾಗಿವೆ. ಮಾರ್ಕ್ಸ್‌ವಾದ ಬಂದರೂ ಅದಕ್ಕೂ ಹಾಕುವರು ಜನಿವಾರ ಇದು ಭಾರತೀಯರ ಜಾತ್ಯಂಧ ಮನೋಸ್ಥಿತಿ ಹಾಗೆಯೇ ಜೈನಧರ್ಮದವರು ಜಾತಿಯತೆಯನ್ನು ಅನುಸರಿಸುತ್ತಾರೆ ಎಂದರೆ ಇನ್ನಾರು ಭಾರತದಲ್ಲಿ ಜಾತಿ ಆರಾಧಕರು ಇಲ್ಲ? ಎಲ್ಲಾ ಧರ್ಮಗಳು ಹುಟ್ಟಿ, ಬಂದು, ಬೆಳೆದು ಹೋದರೂ ಕೂಡ ಜಾತಿಯ ವಿಷಕಾರಿ ಜಂತು ಪಾತಾಳದವರೆಗೆ ಬೇರು ಬಿಟ್ಟಿದೆ. ಅದು ಸಾಯುತ್ತಲೂ ಇಲ್ಲ, ಹೋಗುತ್ತಲೂ ಇಲ್ಲ, ಎಂಬಂತಾಗಿದೆ.

"ಇವೆಲ್ಲಕ್ಕಿಂತ ಹೆಚ್ಚಾಗಿ ಇವತ್ತಿನ ಸಂದರ್ಭವನ್ನು ರಾಮಯ್ಯನವರಂತಹ ಹಿನ್ನೆಲೆಯಿಂದ ಬಂದ ವ್ಯಕ್ತಿಯೊಬ್ಬ ಹೇಗೆ ಪರಿಭಾವಿಸಿಬೇಕು ಅನ್ನುವುದನ್ನು ಹೇಳುತ್ತದೆ. ವೈಯಕ್ತಿಕ ಅನುಭವಗಳಿಗಿಂತ ಸಮಗ್ರೀಯ ಅನುಭವಗಳೇ ಮುಖ್ಯವಾಗಿರುವ ಇವತ್ತಿನ ಸಂದರ್ಭದಲ್ಲಿ ವ್ಯಕ್ತಿಯ ನೆನಪುಗಳಿಗೆ ಅಂತಹ ಮಹತ್ವವೇನೂ ಇಲ್ಲದ ಪರಿಸ್ಥಿತಿ ನಿರ್ಮಾಣವಾಗಿದೆ. ರಾಜಕೀಯ ಧೋರಣೆ ಸಮೂಹ ಪ್ರಜ್ಞೆ ಒಟ್ಟಾರೆ ಸಾಂಸ್ಕೃತಿಕ ನಿಲುವು ಇವುಗಳೇ ಒಬ್ಬ ವ್ಯಕ್ತಿಯ ವೈಚಾರಿಕತೆಯನ್ನು ಪ್ರತಿಬಿಂಬಿಸುವ ಹಾಗೆ ಕಾಣಿಸುತ್ತದೆ."[೧] ಅಂದರೆ ವ್ಯಕ್ತಿಯ ನೆನಪುಗಳೇ ಮುಖ್ಯವಾಗುತ್ತವೆ. ಏಕೆಂದರೆ ಯಾವುದೇ ವ್ಯಕ್ತಿ ಭೂತ ಕಾಲವನ್ನು ತಿಳಿಯದೆ ವರ್ತಮಾನ ಕಾಲವನ್ನು ಅರಿಯುವುದು ತುಂಬಾ ಕಷ್ಟವಾಗುತ್ತದೆ. ಆಧುನಿಕ ಕಾಲಕ್ಕೆ ಕುವೆಂಪು ಅವರ ಅನುಭವಗಳು ಸ್ವಾತಂತ್ರ್ಯ ಪೂರ್ವದವುಗಳು. ಅಂದಿನ ಕಾಲದಿಂದ ಇಂದಿನ ಕಾಲದವರೆಗೆ ಪ್ರಮುಖವಾಗಿ ತಾವು ಕಂಡ ಅನುಭವಗಳನ್ನು ಸಾಹಿತ್ಯವಾಗಿ ವರ್ತಮಾನಕ್ಕೆ ಒಗ್ಗುವಂತೆ ಸೃಷ್ಟಿಸಿದ್ದರಿಂದಲೇ ಇವತ್ತಿಗೂ ನಮಗೆ ಮಹತ್ವರೆನಿಸುತ್ತಾರೆ.



"ಸಿದ್ಧಲಿಂಗಯ್ಯ, ದೇವನೂರು ಮಹಾದೇವ ಮೊದಲಾದವರನ್ನು ದಲಿತ ಸಂಘರ್ಷ ಸಮಿತಿಯ ಜೊತೆ ಜೊತೆಗೆ ಗುರ್ತಿಸುವ ಪ್ರಯತ್ನ ನಡೆದಿದ್ದರೂ ಅವರ ಸೃಜನಶೀಲ ಬರವಣಿಗೆಯನ್ನು ಬೇರೆ ಬೇರೆ ನೋಡುವುದಕ್ಕೆ ಸಹಾಯ ಮಾಡುತ್ತದೆ. ಆದರೆ ಒಬ್ಬ ಸೃಜನಶೀಲ ಲೇಖಕನಲ್ಲದ ವ್ಯಕ್ತಿಯೊಬ್ಬ ಒಂದು ಸಂಸ್ಥೆಯ ಮೂಲಕ ಒಂದು ಸಿದ್ಧಾಂತದ ಮೂಲಕವೇ ತನ್ನನ್ನು ಗುರ್ತಿಸಿಕೊಳ್ಳಬೇಕಾಗಿದೆ."[೨]

ಸೃಜನಶೀಲ ಲೇಖಕರು ಮಾತ್ರ ಇಂಥದರಲ್ಲಿ ಯಶಸ್ವಿಯಾಗುತ್ತದೆ ಎಂಬುದನ್ನು ರಾಮಯ್ಯನವರು ತಮ್ಮ ಪ್ರಾರಂಭದ ಕೃತಿಯಾದ 'ಮಣೆಗಾರ' ಆತ್ಮಕಥನದಲ್ಲಿ ಅಂತಹ ಅಪವಾದವನ್ನು ದಾಟಿ ಒಬ್ಬ ಪ್ರಬುದ್ಧ ಸೃಜನಶೀಲ ಬರಹಗಾರರೆನಿಸಿಕೊಂಡಿದ್ದಾರೆ. "ರಾಮಯ್ಯನಂತಹವರು ತಾವು ನಂಬಿದ, ಅನುಸರಿಸಿದ ಸಿದ್ಧಾಂತಗಳನ್ನು ತಮ್ಮ ನೆನಪುಗಳ ಮೇಲೆ ಹೇರಲು ಯತ್ನಿಸದೇ ಇರುವುದ ಕುತೂಹಲದ ಚಳುವಳಿಯ ಮುಖಾಂತರ ಅವರು ರೂಪಿಸಿಕೊಂಡ ಅನುಭವಗಳನ್ನಾಗಲಿ ಪ್ರಭಾವಿಸಿಲ್ಲ. ಇದೇ ಇವರ ಬರಹದ ವೈಶಿಷ್ಟ್ಯ ಕೂಡ. ನಮ್ಮಲ್ಲಿ ನೋವುಗಳನ್ನು ದಾಖಲಿಸುವಾಗ ಕೂಡ

---

೧. ದಲಿತ ಮಾರ್ಗ, ಸಂ. ಅರವಿಂದ ಮಾಲಗತ್ತಿ, ಪು. ೩೯೭.
೨. ಅದೇ, ಪು. ೩೯೭.

ಹಾಸ್ಯ ಪ್ರಜ್ಞೆ ಚಿಮ್ಮುತ್ತಿರಬೇಕು. ಅಪಮಾನದ ವಿವರಗಳನ್ನು ಲವಲವಿಕೆಯಿಂದ ಬರೆಯಬೇಕೆಂದು ನಿರೀಕ್ಷಿಸುವವರಿದ್ದಾರೆ. ಆದರೆ ಈ ಆತ್ಮಕಥನದಲ್ಲಿ ರಾಮಯ್ಯ ಅವರಿಗೆ ತಿಳಿ ಹಾಸ್ಯ ತಾನೇ ತಾನಾಗಿ ಸಿದ್ಧಿಸಿದ, ಅದು ಅನುಭವಗಳ ತೀವ್ರತೆಯನ್ನು ವೈಭವೀಕರಿಸುವುದಿಲ್ಲ, ಅನುಮಾನಿಸುವಂತೆ ಮಾಡುವುದಿಲ್ಲ. ಇಷ್ಟು ಸರಳವಾಗಿ ಇಂಥ ದಟ್ಟ ಅನುಭವಗಳನ್ನು ಹೇಳುವುದಕ್ಕೆ ಸಾಧ್ಯವೇ ಎಂದು ಅಚ್ಚರಿಮೂಡಿಸುತ್ತವೆ."[೧]

ರಾಮಯ್ಯನವರು ತಮ್ಮ ಆತ್ಮದ ಕೆಲವು ಮಾತುಗಳನ್ನು ಹೇಳುವ ಸಂದರ್ಭದಲ್ಲಿ ಸಮಾಜದ ಕಡೆಗೆ ತಮ್ಮ ಪ್ರೀತಿಯ ಭಾವದಿಂದ ನೋಡುವುದು ಎಂತಹ ಕಹಿ ಅನುಭವವನ್ನು ಮುಗುಳು ನಗೆಯಿಂದ ಸ್ಮರಿಸಿಕೊಳ್ಳುವುದು ರಾಮಯ್ಯನವರ ಸೌಜನ್ಯಕ್ಕೆ ಸಾಕ್ಷಿಯಾಗಿದೆ.

"ದಲಿತ ಮಂತ್ರಿಯಾದರು ಬಿಸಿಲಲ್ಲಿ ಬೆಂಡಾಗಿ ತಿಮ್ಮರೆಡ್ಡಪ್ಪನ ಹೆಣವನ್ನು ಮುಂದಿಟ್ಟುಕೊಂಡು ಕುಳಿತಿದ್ದ ನಮ್ಮನ್ನು ಸೌಜನ್ಯಕ್ಕಾದರು ಬಂದು ಮಾತನಾಡಿಸಲಿಲ್ಲ. ಬದಲಾಗಿ ತನ್ನ ಮಹಡಿಯ ಮೇಲೆ ನಿಂತು ಘೋಷಣೆ ಕೂಗುತ್ತಿದ್ದ ನಮ್ಮನ್ನು ಮತ್ತು ತಿಮ್ಮರೆಡ್ಡಪ್ಪನ ಹೆಣವನ್ನು ಉದ್ದೇಶಿಸಿ ಭಾಷಣ ಮಾಡಿ ಹೊರಟುಹೋದರು."[೨]

ಅಂದರೆ ಈ ಆತ್ಮಕತೆಯಲ್ಲಿ ಇದೇ ಕೊನೆಯ ಪ್ರತಿಭಟನೆ ಅನಿಸುತ್ತದೆ. ಇಲ್ಲಿ ಅಂದಿನ ರಾಜಕೀಯ ಪಕ್ಷಗಳು ದಲಿತ ವ್ಯಕ್ತಿಗಳನ್ನು ಮತಚಲಾಯಿಸುವ ಒಂದು ಗೊಂಬೆಯೆಂದು ತಿಳಿದುಕೊಂಡ ಪ್ರಸಂಗ ಕೂಡ ಸಮಾಜದಲ್ಲಿತ್ತು. ಇಂದು ನಾವು ಕೂಡ ಒಬ್ಬರು ಎಂದು ಎದೆ ತಟ್ಟಿ ನಿಲ್ಲುವಂತಹ ಸ್ಥಿತಿಗೆ ತಲುಪುವುದು ಹತ್ತಿರ ಬರುತ್ತಿದೆ.

"ಒಂದು ದಿನ ನಾವು ಊಟ ಮಾಡುವಾಗ ಡೈರಿಯ ಅಧ್ಯಕ್ಷರು ಮಾತಿನ ನಡುವೆ ತಾವು ಯಾವ ಜಾತಿ ಸರ್? ಎಂದು ಕೇಳಿದರು. ಈ ಸಲ ನಾನು ಹಿಂದುಮುಂದು ನೋಡದೆ ನಾನು ನನ್ನ ಜಾತಿಯನ್ನು ಹೇಳಬೇಕೆಂದು ಬಾಯಿ ತೆರೆಯುವ ಮುಂಚೆ ನೀವು ನಾಯಕರಲ್ಲವೇ ರಾಮಯ್ಯ? ಎಂದು ಪಕ್ಕದಲ್ಲಿ ಊಟ ಮಾಡುತ್ತಿದ್ದ ಅಧಿಕಾರಿ ಹೇಳಿಬಿಟ್ಟರು."[೩]

---

೧. ಮಣೆಗಾರ, ಪು. ೩೯೭.
೨. ಅದೇ, ಪು. ೮೨.
೩. ಅದೇ, ಪು. ೧೦೫

ಇದು ಸೌಜನ್ಯಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ತನ್ನ ಜಾತಿಯನ್ನು ಹೇಳಲು ಹಾತೊರೆಯುವ ಮನಸ್ಸಿಗೆ ಯಾವ ರೀತಿಯ ಪರಿಸ್ಥಿತಿಗಳು ಬದಲಾವಣೆಯನ್ನು ತರುತ್ತವೆಯೆಂದು ಇದಿರಂದ ತಿಳಿಯಬಹುದು. ಇದು ಜಾತಿಯನ್ನು ಮುಚ್ಚುವುದು ಮುಖ್ಯವಲ್ಲ ಇಲ್ಲಿ ಗಮನಿಸಬೇಕಾದ ಅಂಶ ಜಾತಿಯನ್ನು ಕೇಳಿರುವ ಸ್ಥಿತಿಯನ್ನು ಯಾವುದೇ ಸೌಜನ್ಯ, ಅವೇಶದ ಮಾತುಗಳನ್ನು ಆಡದೆ ಹೇಳಿರುವುದು ಇವರ ದೊಡ್ಡ ಗುಣವೆನಿಸುತ್ತದೆ.

"ನಮ್ಮ ಆತ್ಮಕತೆಗಳ ಸಾಲಿನ ಈ ಅಸಲಿ ಹೊತ್ತಗೆಯ ಮೇಲು ನೋಟಕ್ಕೆ ಕೇವಲ ಆತ್ಮಕಥನದಂತಿದ್ದರೂ ಇದರ ಎಲ್ಲಾ ಭಾಗಗಳೂ ಕಾವ್ಯ, ಕಥೆ, ಪ್ರಬಂಧ ಹಾಗೂ ಆತ್ಮಕತೆಯ ಸ್ವರೂಪವನ್ನು ಅರಗಿಸಿಕೊಂಡು ಹೊಚ್ಚ ಹೊಸತನದಿಂದ ಕಂಗೊಳಿಸುತ್ತವೆ. ಪ್ರೊಫೇಸರ್ ಕಾಳೇಗೌಡ ನಾಗವಾರರ ಮುನ್ನುಡಿಯ ಮಾತುಗಳು ಈ ಕೃತಿಗೆ ಸರ್ವದೃಷ್ಟಿಯಿಂದಲೂ ಒಪ್ಪಿತವಾಗುತ್ತದೆ. ಈ ಕೃತಿ ಸಾಂಸ್ಕೃತಿಕವಾಗಿ ಬಹಳ ಮಹತ್ವವಾಗಿ ನಮ್ಮ ಎದುರಿಗೆ ಅಂದಿನ ಕಾಲದ ಆಚಾರ, ವಿಚಾರ, ನಂಬಿಕೆ ಮುಂತಾದ ವಿಷಯಗಳ ಸಮಗ್ರ ಚಿತ್ರಣವನ್ನು ನೀಡುತ್ತದೆ.

# ಅಧ್ಯಾಯ – ೭

## ಆತ್ಮಕತೆಗಳ ತೌಲನಿಕ ವಿಶ್ಲೇಷಣೆ

ಒಂದು ಕಾಲಘಟ್ಟದಲ್ಲಿ ಅಭಿವ್ಯಕ್ತವಾದ ಸಾಹಿತ್ಯ ಪ್ರಕಾರವೊಂದು ಆ ಕಾಲಘಟ್ಟದಲ್ಲಿನ ಬರಹಗಾರರನ್ನು ಆಧರಿಸಿಯೇ ತನ್ನ ಸ್ವರೂಪವನ್ನು ನಿರ್ಧರಿಸಿಕೊಳ್ಳುತ್ತಿರುತ್ತದೆ. ಹೀಗೆ ನಿರ್ಧಾರವಾಗುವಲ್ಲಿ ಬರಹಗಾರರ ದೃಷ್ಟಿ ಧೋರಣೆಗಳನ್ನು ಪ್ರಮುಖ ಮಾನದಂಡವಾಗಿ ಮಹತ್ವ ಪಡೆಯುತ್ತವೆ. ಅಧ್ಯಯನದ ಕಕ್ಷೆಯಲ್ಲಿರುವ ಆತ್ಮಕತೆಗಳು ಆ ಕಾಲದ ಪ್ರಚಲಿತ ಘಟನೆಗಳನ್ನು ಅಥವಾ ಸಂಗತಿಗಳನ್ನು ತನ್ನ ಆತ್ಮ-ಕತೆಯಲ್ಲಿ ಹೇಳುವುದಕ್ಕೆ ಪ್ರಯತ್ನ ಪಟ್ಟಿರುವುದನ್ನು ಗಮನಿಸಲಾಗಿದೆ.

ಸಮಾಜವೊಂದರ ಜ್ವಲಂತ ಸಮಸ್ಯೆಗಳು ಆ ಸಮಾಜದ ಅಭಿವೃದ್ಧಿಗೆ ಕಾರಣವಾಗುತ್ತವೆ. ಜಾತಿ, ಹಸಿವು, ಬಡತನ, ಅಸ್ಪೃಶ್ಯತೆ ಮುಂತಾದ ಅಸಮಾನತೆಗಳು ಸಮಾಜವೊಂದನ್ನು ಬುಡಮೇಲು ಮಾಡಲು ಕಂಕಣಬದ್ಧವಾಗಿ ನಿಂತಿರುತ್ತದೆ. ಇವು ಭಾರತೀಯ ಜನ-ಜೀವನದ ಸಂದರ್ಭದಲ್ಲಿ ಒಂದಲ್ಲ ಒಂದು ರೀತಿಯ ಅಸ್ತವ್ಯಸ್ಥತೆಗೆ ಗುರಿ ಮಾಡಿದೆ. ಇಂತಹ ಅಸಮನತೆಗಳನ್ನು ತೊಡೆದು ಹಾಕುವ ಕಾರ್ಯ ಬರಹಗಾರನದ್ದಾಗಿದ್ದಾಗ ಸಾಮಾಜಿಕ ಆಶಯದ ಧ್ವನಿ ಹೆಚ್ಚು ಗಟ್ಟಿಯಾಗಿ ಕೇಳಿಸುತ್ತದೆ.

ಅಸಮಾನತೆಯನ್ನು ಪ್ರತಿಬಿಂಬಿಸುವ ಅಥವಾ ಹೇಳುವ ಈ ದಲಿತ ಆತ್ಮಕತೆಗಳು ಆಂತರ್ಯದಲ್ಲಿ ಚಲನಶೀಲ ಬದುಕನ್ನು ಅಭಿವೃದ್ಧಿ ಪಥ ಸಮಾಜವನ್ನು ಕಟ್ಟಲು ನಿರೀಕ್ಷಿಸುತ್ತಿರುತ್ತವೆ. ಸಮಾಜ ವ್ಯವಸ್ಥೆಯಾಗಿ ಆಯಾ ಕಾಲದಲ್ಲಿ ತನ್ನ ಜನ ವಿರೋಧಿ ಹಾಗೂ ಪ್ರತಿಗಾಮಿ ಧೋರಣೆಗಳಿಂದ ಯಾವತ್ತೂ ಬರಹಗಾರನಿಂದ ವಿರೋಧಕ್ಕೆ ಒಳಗಾಗುತ್ತಿರುತ್ತದೆ. ದಲಿತ ಸಾಹಿತ್ಯ ಸಂದರ್ಭದಲ್ಲಿ ಬಂದ ಬರಹವು ಸ್ಪಷ್ಟವಾಗಿ ವ್ಯವಸ್ಥೆಯ ವಿರೋಧವನ್ನು ಕಟ್ಟಿಕೊಡಲು ಇಂತಹ ವಿರೋಧವು ಆರೊಗ್ಯಕರವಾದ ಮತ್ತು ಪ್ರಗತಿಪರ ಸಮಾಜ ಸ್ಥಾಪನೆಯ ಉದ್ದೇಶಕ್ಕಾಗಿ ಬಂದಂತಹವುಗಳಾಗಿದೆ. ಸಮಾಜದ ಜೊತೆಗೆ ಸ್ಪಷ್ಟವಾದ, ನಿರ್ದಿಷ್ಟವಾದ ಸಂಬಂಧವನ್ನು ಘೋಷಿಸಿಕೊಂಡ ಸಾಹಿತ್ಯವಾಗಿ ದಲಿತ ಸಾಹಿತ್ಯ ಕಾಣಿಸಿಕೊಂಡಿತು. ಇದರಿಂದಾಗಿ ಸಾಮಾಜಿಕ ಅಸಮಾನತೆಗಳ ವಿರುದ್ಧ ಧ್ವನಿ ಎತ್ತುವ ಸಮಾನತೆಯ ಸಮಾಜ ಸ್ಥಾಪಿಸಲು ಇರುವ ಅಡ್ಡಿ ಆತಂಕಗಳ ಮೇಲೆ ಬೆಳಕು ಚೆಲ್ಲುವ ಕೆಲಸವನ್ನು

ದಲಿತ ಸಾಹಿತ್ಯ ಸಂದರ್ಭದಲ್ಲಿ ಈ ಆತ್ಮಕತೆಗಳು ತನ್ನ ಬದುಕಿನೊಂದಿಗೆ ಸಮಸ್ಯೆಯನ್ನು ಅನಾವರಣ ಮಾಡುವುದು. ಅಂದಿನ ಪರಿಸ್ಥಿತಿಗೆ ಸ್ವಾಭಾವಿಕವಾಗಿಯೇ ಅನಿವಾರ್ಯವೆನಿಸಿತು.

ನನ್ನ ಕಕ್ಷೆಯ ಆತ್ಮಕತೆಗಳಾದ 'ಊರು ಕೇರಿ' ಮತ್ತು 'ಮಣೆಗಾರ' ಇವುಗಳಲ್ಲಿ ವ್ಯಕ್ತವಾದ ಅಸ್ಪೃಶ್ಯತೆ ಜಾತೀಯತೆಯ ತೌಲನಿಕ ದೃಷ್ಟಿ.

ಊರುಕೇರಿಯಲ್ಲಿ ವ್ಯಕ್ತವಾದ ಅಸ್ಪೃಶ್ಯತೆ ಮತ್ತು ಜಾತೀಯತೆ ಎಂಬುದು ಒಂದು ಸಮುದಾಯದ ಒಂದು ಗುಂಪಿನ ಮತ್ತು ಸುತ್ತಲಿನ ಪರಿಸರದಲ್ಲಿ ಕಂಡುಬರುವುದನ್ನು ಊರುಕೇರಿ ಆತ್ಮಕತೆಯಲ್ಲಿ ನಾವು ಕಾಣಬಹುದು. ಇಲ್ಲಿ ಪ್ರಮುಖವಾಗಿ ದಲಿತರಿಗೆ ನೀರಿನ ಸಂಬಂದವಾಗಿ ನಡೆದ ಅಸ್ಪೃಶ್ಯತೆಯ ಕರಾಳ ಛಾಯೆಯನ್ನು ನಾವು ಗಮನಿಸಬಹುದು. ಹಾಗೆಯೇ ದಲಿತರು ನೀರು ತರಲು ಹೋದರೆ ಆ ಬಾವಿಯಲ್ಲಿ ಯಾರೂ ಮೇಲ್ವರ್ಗದ ಜನತೆ ನೀರು ತರುತ್ತಿರಲಿಲ್ಲ. ಇದೇ ರೀತಿ ಅಸ್ಪೃಶ್ಯತೆ ದೇವಸ್ಥಾನಕ್ಕೆ ಪ್ರವೇಶ ನೀಡದ ಸಂದರ್ಭವನ್ನು ಗಮನಿಸಬಹುದಾಗಿದೆ. ಹಾಗೆಯೇ ಸಿದ್ದಲಿಂಗಯ್ಯ ಅವರು ತಮ್ಮ ಬಾಲ್ಯದ ದಿನಗಳಲ್ಲಿ ತನ್ನ ಅಜ್ಜಿಯೊಂದಿಗೆ ಪಕ್ಕದ ಊರಿಗೆ ಹೋಗುವ ಸಂದರ್ಭದಲ್ಲಿ ನಡೆದ ಘಟನೆಯನ್ನು ನಾವು ಗುರುತಿಸಬಹುದಾಗಿದೆ. ಮೇಲ್ವರ್ಗದವರಿಗೆ ತನ್ನ ಕೈ ತಗಲಿದ್ದರಿಂದ ಆ ವ್ಯಕ್ತಿಯ ಪ್ರತಿಕ್ರಿಯೆ ಕೀಳು ಜಾತಿಯಲ್ಲಿ ಹುಟ್ಟಿದವನು ನನ್ನನ್ನು ಮುಟ್ಟಿದನೆಂದು ತನ್ನ ಅಜ್ಜಿಯ ಸಂಗಡ ಜಗಳಕ್ಕೆ ಕಾರಣವಾಯಿತು. ಅಂದಿನಿಂದ ಇವರು ಮೇಲ್ವರ್ಗವನ್ನು ಮುಟ್ಟುವ ಗೊಡವೆಗೆ ಹೋಗುವುದಿಲ್ಲ.

"ಮಣೆಗಾರ" ಆತ್ಮಕತೆಯಲ್ಲಿ ವ್ಯಕ್ತವಾದ ಅಸ್ಪೃಶ್ಯತೆಯ ಬಗ್ಗೆ ಅಷ್ಟೇನು ಮಹತ್ವವಾಗಿ ತೋರುವುದಿಲ್ಲವೆಂದೇನಲ್ಲ ಇಲ್ಲಿ ಹೇಳುವ ರೀತಿಯಿಂದ ಇದು ವಿಶಿಷ್ಟವಾಗುತ್ತದೆ. ಇಲ್ಲಿ ದೇವಸ್ಥಾನಕ್ಕೆ ಪ್ರವೇಶವನ್ನು ಮತ್ತು ಸುತ್ತಮುತ್ತಲಿನ ಹಳ್ಳಿಯ ಗುಡಿಯೊಳಕ್ಕೆ ಮಣೆಗಾರ ಜಾತಿಯವರಿಗೆ ಪ್ರವೇಶವಿಲ್ಲ ಎನ್ನುವ ಪ್ರಸಂಗ ಹಾಗೇ ಗೊಲ್ಲಹಳ್ಳಿಯಲ್ಲಿ ಇರುವ ಜೈನರ ಅಂಗಡಿಗೆ ಪ್ರವೇಶವಿಲ್ಲ. ಅಲ್ಲಿಯ ವ್ಯಾಪಾರಗಾರರು ತನ್ನ ಕೈಯಿಂದ ಮುಟ್ಟಿದರೆ ಅಪವಿತ್ರವಾದುದೆಂದು ಕೋಲಿನಿಂದ ಸಾಮಾನುಗಳನ್ನು ನೀಡುವುದು ಇಲ್ಲಿ ಅಸ್ಪೃಶ್ಯತೆಯನ್ನು ನಾವು ಕಾಣಬಹುದು.

ಆದರೆ ಊರುಕೇರಿಯಲ್ಲಿ ಅಸ್ಪೃಶ್ಯತೆಗೆ ಕೊನೆ ಎಂಬುದು ಇರಲಿಲ್ಲ. ತನ್ನ ಬಾಲ್ಯದ ದಿನಗಳಲ್ಲಿ ಎಲ್ಲಿಯೂ ಈ ಅಸ್ಪೃಶ್ಯತೆಯಿಂದ ಮೇಲೆ ಬರಲು ಸಾಧ್ಯವಾಗಲಿಲ್ಲ. "ಮಣೆಗಾರ" ಆತ್ಮಕತೆಯಲ್ಲಿ ಮಣೆಗಾರ ಜಾತಿಯವರು ದೇವಸ್ಥಾನವನ್ನು ಕಟ್ಟುವ ಸಂದರ್ಭದಲ್ಲಿ ಕೀಳು ಜಾತಿಯವರೇ ಅಲ್ಲ ಕೆಲಸ ಮಾಡುವ ಪ್ರಸಂಗವಿತ್ತು. ಅಂಥ ಸಮಯದಲ್ಲಿ ದೇವಸ್ಥಾನಕ್ಕೆ ಪ್ರವೇಶ ಸಿಕ್ಕಿತು ಎಂಬ ಧೋರಣೆಯನ್ನು ಆತ್ಮಕಥನಕಾರರು ನಾನು ದೇವರನ್ನು ಮನಸಾರೆ ಅಪ್ಪಿಕೊಂಡೆನೆಂದು ಹೇಳಿಕೊಂಡಿದ್ದಾರೆ.

"ಊರುಕೇರಿ" ಆತ್ಮಕತೆಯಲ್ಲಿ ಬಹಳವಾದ ಪ್ರಖರತೆಯನ್ನು ಉಂಟುಮಾಡುತ್ತದೆ. ಇಲ್ಲಿ ವ್ಯಕ್ತವಾದ ಪ್ರಸಂಗಗಳು ದಲಿತರ ಕೇರಿಗಳು ಪ್ರತ್ಯೇಕತೆ ಮತ್ತು ಮೇಲು ಜಾತಿಯವರ ಮನೆಯೇ ಬೇರೆ ದಲಿತರ ಮನೆಗಳೇ ಬೇರೆ. ಇದಕ್ಕೆ ಅಡ್ಡಲಾಗಿ ರಸ್ತೆ ಇತ್ತು ಎಂದು ಹೇಳಿಕೊಂಡಿದ್ದಾರೆ. ಹಾಗೆಯೇ ಮಂಟೇಸ್ವಾಮಿಯ ಗುರುಗಳು ತಮ್ಮ ಊರಿಗೆ ಬಂದರೂ ತಮ್ಮ ಕೇರಿಗೆ ಬರದೇ ಇರಲು ಆತ ಮೇಲ್ ಜಾತಿಯ ವರ್ಗಕ್ಕೆ ಸೇರಿದವನು. ಮತ್ತೆ ದಲಿತರ ಹೊಟೇಲ್‌ಗೆ ಯಾರು ಪ್ರವೇಶಿಸಲು ಸಾಧ್ಯವಾಗುತ್ತಿರಲಿಲ್ಲ. ಈ ರೀತಿಯಲ್ಲಿ ಜಾತೀಯತೆಗೆ ಕನ್ನಡಿ ಹಿಡಿದಂತಹ ಘಟನೆಗಳನ್ನು ಕಾಣಬಹುದು.

"ಮಣೆಗಾರ" ಕೃತಿಯಲ್ಲಿ ಜಾತಿಯತೆ ಅಷ್ಟೇನು ವ್ಯಕ್ತವಾಗಿಲ್ಲ. ಒಂದೇ ಒಂದು ಪ್ರಸಂಗ ತನ್ನ ಅಣ್ಣನ ಸಾವು ಶಿಕ್ಷಣದ ಸಂದರ್ಭದಲ್ಲಿ ಬಹಳ ಬುದ್ಧಿವಂತನಾದವನನ್ನು ಮೇಲ್ಜಾತಿಯವರು ಕೆಳಮಟ್ಟಕ್ಕೆ ಇಳಿಸುವ ಪ್ರಯತ್ನದಿಂದ ತನ್ನ ಅಣ್ಣನ ಸಾವು ಆಯಿತು ಎಂದು ಹೇಳುವ ಪ್ರಸಂಗ ಹಾಗೆಯೇ ಹೊಲೆ ಮಾದಿಗಂಗೆ ಹಾಲು ಮೊಸರು ಕೊಟ್ಟರೆ ಹಸು. ಎಮ್ಮೆಗಳು ರಕ್ತವನ್ನೇ ಕರೆಯುತ್ತವೆ ಎನ್ನುವ ನಂಬಿಕೆ ಮೇಲ್ವರ್ಗದವರಿಗೆ ಇತ್ತು. ಆದರೆ ಸಿದ್ದಲಿಂಗಯ್ಯ ಅವರ 'ಊರುಕೇರಿ' ಆತ್ಮಕತೆಯಲ್ಲಿ ಕಂಡು ಬರುವಂತೆ ಜಾತೀಯತೆ 'ಮಣೆಗಾರ' ಆತ್ಮಕತೆಯಲ್ಲಿ ಸ್ವಲ್ಪ ಭಿನ್ನವೆಂದು ತಿಳಿಯಬಹುದು.

ತುಂಬಾಡಿ ರಾಮಯ್ಯ ಅವರ ಪರಿಸರದ ಸುತ್ತಲೂ ಎಲ್ಲಾ ಜಾತಿಯರಿದ್ದರೂ ಅದರ ಜಾತೀಯತೆಯ ಪ್ರಖರತೆ ಕಡಿಮೆ. ಮುಸ್ಲಿಂ ಜನಾಂಗವಿಲ್ಲದ ಊರಿನಲ್ಲಿ ಬಾಬಯ್ಯನ ಜಾತ್ರೆ ಮಾಡುವುದು ಹಬ್ಬದ ದಿನಗಳಲ್ಲಿ ಎಲ್ಲರೂ ಒಟ್ಟಾಗಿ ಸೇರಿ ಆಚರಿಸುವ ರೀತಿಯನ್ನು ಕಾಣಬಹುದು. ಮತ್ತು ಮೇಲ್ವರ್ಗದ ಜನರು ಮಾದಿಗ

ಜಾತಿಯವರನ್ನು ತುಂಬಾ ಪ್ರೀತಿಯಿಂದ ಭಾವ, ಅಳಿಯ, ಅತ್ತೆ, ಮಾವ ಎಂದು ಸಂಬೋಧಿಸುತ್ತಿದ್ದರೆಂದು ರಾಮಯ್ಯ ಅವರು ಹೇಳಿಕೊಂಡಿದ್ದಾರೆ. ಇಡೀ 'ಮಣೆಗಾರ' ಆತ್ಮಕತೆಯಲ್ಲಿ ಎರಡೋ ಅಥವಾ ಮೂರೋ ಪ್ರಸಂಗ ಮಾತ್ರ ಜಾತಿ ಪದ್ಧತಿಯ ಬಗ್ಗೆ ಸ್ಪಷ್ಟ ಬೆಳಕು ನೀಡಿದರೂ ಅದನ್ನು ರಾಮಯ್ಯನವರು ಸೌಮ್ಯವಾದ ರೀತಿಯಲ್ಲಿ ಹೇಳಿಕೊಂಡಿದ್ದಾರೆ. ಮಣೇಗಾರ ಆತ್ಮಕತೆಯ ನಾಯಕನ ತಂದೆ ಅತ್ಯಂತ ಬಡತನವನ್ನು ಅನುಭವಿಸುತ್ತಾ ಹಂದಿ ಕಾಯುವುದು, ಚಪ್ಪಲಿ ರಿಪೇರಿ ಮಾಡುವುದು ಈ ಎಲ್ಲಾ ಕಾಯಕಗಳು ತೀರಾ ಸಹಜವಾದಂತಹ ಅನುಭವಗಳು. ಈ ಅನುಭವಗಳನ್ನು ರಾಮಯ್ಯನವರು ನೇರ ನುಡಿಗಳಿಂದ ಅಭಿವ್ಯಕ್ತಪಡಿಸಿದ್ದಾರೆ.

'ಬಡತನ' ಮತ್ತು 'ಹಸಿವು' ಈ ದಲಿತ ಆತ್ಮಕತೆಗಳಲ್ಲಿ ಪ್ರಮುಖವಾದಂತಹ ಅಂಶಗಳಾಗಿವೆ. ಎರಡೂ ಆತ್ಮಕತೆಗಳು ಬಡತನ ಮತ್ತು ಪ್ರತಿಭೆ ಇವುಗಳ ವಸ್ತುವೆಂದು ತೋರುತ್ತವೆ. ಊರುಕೇರಿಯಲ್ಲಿ ತನ್ನ ತಂದೆ ಶ್ರೀಮಂತರ ಹೊಲಗಳಲ್ಲಿ ದನದ ರೀತಿಯಲ್ಲಿ ನೇಗಿಲು ಹೊತ್ತು ಉಳುವ ಪ್ರಸಂಗ, ಬಡತನ ಪ್ರತೀಕವೆಂಬಂತೆ ಕಂಡುಬಂದಿದೆ. ಅಂದಿನ ಸ್ಥಿತಿಯಲ್ಲಿ ದಲಿತರು ಶ್ರೀಮಂತರ ಮನೆಗಳಲ್ಲಿ ದುಡಿದು ತಿನ್ನುವುದಕ್ಕೂ ಕಷ್ಟದ ಪರಿಸ್ಥಿಯಲ್ಲಿ ತನ್ನ ಬಾಲ್ಯದ ದಿನಗಳಲ್ಲಿ ಅನುಭವಿಸಿರುವುದನ್ನು ನಾವು ಕಾಣಬಹುದಾಗಿದೆ.

ಹಸಿವಿನ ಸ್ಥಿತಿ ಎಲ್ಲಾ ವರ್ಗದಲ್ಲೂ ಕಂಡುಬರುತ್ತವೆ. ಆದರೆ ವಿಶೇಷವಾಗಿ ದಲಿತರ ಮನೆಗಳಲ್ಲಿ ಕಾಣುತ್ತೇವೆ. ಶ್ರೀಮಂತರ ಮನೆಯಲ್ಲಿ ಅನ್ನಕ್ಕಾಗಿ ಕಾಯುವ ಪರಿಸ್ಥಿತಿ ಅಂದಿನ ದಲಿತ ಜನ ಸಮುದಾಯಕ್ಕೆ ಅನಿವಾರ್ಯವಾಗಿತ್ತು. ಇಂಥ ಅನುಭವಗಳ ಸಂಗ್ರಹದಿಂದ ಇಡೀ ಸಮುದಾಯದ ಪ್ರಜ್ಞೆಯನ್ನು ಅನಾವರಣಗೊಳಿಸುತ್ತದೆ. ಮತ್ತು ಇಂತಹ ಬಡತನ ಹಸಿವುಗಳಿಂದ ಧೈರ್ಯಗುಂದದೆ ಶಿಕ್ಷಣದಲ್ಲಿ ಮುಂದುವರೆಸುವುದಕ್ಕೆ ಊರುಕೇರಿ ಆತ್ಮಕತೆ ಸಾಕ್ಷಿಯಾಗಿ ನಿಲ್ಲುತ್ತದೆ.

ಶಿಕ್ಷಣದ ಸಂದರ್ಭದಲ್ಲಿ ಹಾಸ್ಟೆಲ್‌ನಲ್ಲಿಯೂ ಸರಿಯಾದ ವ್ಯವಸ್ಥೆ ಇರಲಿಲ್ಲ. ಅಲ್ಲಿಯೂ ಅನ್ನಕ್ಕಾಗಿ ಕಚ್ಚಾಡುವ ಪರಿಸ್ಥಿತಿಯಿತ್ತು. ಅನ್ನದಲ್ಲಿ ಹುಳುಗಳು ಕೂಡ ಇರುತ್ತಿದ್ದವು. ಅವೆಲ್ಲವು ಸಹ ಮನಃಕಲಕುತ್ತವೆ.

'ಮಣೆಗಾರ' ಕೃತಿಯಲ್ಲಿ ಬಡತನ ಹಸಿವು ಇವುಗಳು ಕಂಡುಬರುತ್ತವೆ. ರಾಮಯ್ಯ ಅವರ ವಾಸದ ಮನೆಯಿಂದ ಇದನ್ನು ತಿಳಿಯಬಹುದು. ಮತ್ತು ಒಂದು ದಿನ ಶಾಲೆಯಿಂದ ಬಂದ ತಕ್ಷಣ ಊಟವಿಲ್ಲದೆ ಪರದಾಡುವ ಸ್ಥಿತಿಯಿತ್ತು. ಅಂತಹ ವೇಳೆಯಲ್ಲಿ ಹಸಿವು ತಡೆಯಲಾರದೇ ಶ್ರೀಮಂತರ ಹೊಲಕ್ಕೆ ಹೋಗಿ ಕಡಲೆಕಾಯಿ ಗಿಡ ಕಿತ್ತು ಕಳ್ಳತನ ಮಾಡಿ ತಿನ್ನುವಂತಹ ಸ್ಥಿತಿಗೆ ತಲುಪಿದ್ದರು. ಹಸಿವು ಯಾವುದೇ ವ್ಯಕ್ತಿಯನ್ನು ಬಿಟ್ಟಿದ್ದಲ್ಲ. ಏನು ಬೇಕಾದರೂ ಮಾಡಿಸಿ ಬಿಡುತ್ತದೆ ಎಂಬುದಕ್ಕೆ ಸಾಕ್ಷಿಯಾಗಿದೆ.

"ಊರುಕೇರಿ'ಯಲ್ಲಿ ಬಡತನ, ಹಸಿವುಗಳು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಸಹ ಇತ್ತು ಎಂಬುದಕ್ಕೆ ಅವರ ಆತ್ಮಕತೆಯಲ್ಲಿ ಹೇಳಿಕೊಂಡಿದ್ದಾರೆ. (ಪು. ೪೬-೭೯)ಆದರೆ 'ಮಣೆಗಾರ' ಆತ್ಮ ಕತೆಯಲ್ಲಿ ಗ್ರಾಮೀಣ ಜೀವನದಲ್ಲಿ ಬಡತನ ಮತ್ತು ಹಸಿವುಗಳ ಧಾರುಣ ಸ್ಥಿತಿಯನ್ನು ಮನಮುಟ್ಟುವಂತೆ ಚಿತ್ರಿಸಿರುವುದು ಕಂಡುಬರುತ್ತದೆ.

ಈ ಒಂದು ಪ್ರಸಂಗದಲ್ಲಿ 'ಊರುಕೇರಿ' ಮತ್ತು 'ಮಣೆಗಾರ' ಆತ್ಮಕತೆಗಳು ಭಿನ್ನವೆಂದು ಕಾಣುತ್ತದೆ. ಹಾಗೆಯೇ ಜೀವನವನ್ನು ನೋಡುವ ದೃಷ್ಟಿಯೂ ಸಹ ಬೇರೆ-ಬೇರೆಯಾಗುತ್ತವೆ. ದೇವರು ಮನುಷ್ಯನ ಮೇಲೆ ಬರುತ್ತಾರೆಂಬ ನಂಬಿಕೆ ಮತ್ತು ದೆವ್ವಗಳು ಇವೆ ಎಂಬುದು ವಿದ್ಯಾರ್ಥಿ ದೆಸೆಯಿಂದಲೆ ಸಿದ್ದಲಿಂಗಯ್ಯ ಅವರಲ್ಲಿ ಕಾಣಿಸಿಕೊಂಡಿರುವುದನ್ನು ಉಲ್ಲೇಖಿಸಿದ್ದಾರೆ. ಇಲ್ಲಿ ಅನೇಕ ದೇವರ ಪರಂಪರೆಯ ಜನರು ಇದ್ದವೆಂದು ಹೇಳಿ ಮನೆಯ ದೇವರು ಮಂಟೇಸ್ವಾಮಿ, ಗೆದ್ದಲಗೆರೆಯಮ್ಮ ಮುಂತಾದ ಹೆಸರುಗಳು ವ್ಯಕ್ತವಾಗಿವೆ.

'ಮಣೆಗಾರ'ದಲ್ಲಿಯೂ ವೀರ ನಾಗಮ್ಮ ಎಂಬ ಹೆಣ್ಣು ದೇವತೆಯನ್ನು ಸುತ್ತಲಿನ ಜನರು ಮೆಚ್ಚಿ ಆರಾಧಿಸುತ್ತಿದ್ದರೆಂದು ತಿಳಿದುಬರುತ್ತದೆ. ಬಾಬಯ್ಯನ ಜಾತ್ರೆಯ ಉತ್ಸವ ಮುಂತಾದ ಪ್ರಸಂಗಗಳು ಇದಕ್ಕೆ ಉದಾಹರಣೆಯಾಗಿ ನಾವು ಕೊಡಬಹುದು. ದಲಿತರ ಆತ್ಮಕತೆಗಳಲ್ಲಿ ಹೋರಾಟವನ್ನು ತಮ್ಮ ಜೀವನದ ಒಂದು ಅಂಗವಾಗಿ ಮಾಡಿಕೊಂಡಿರುವುದು ಗೋಚರಿಸುತ್ತದೆ. ಅಂದರೆ ಮೇಲು ವರ್ಗದವರಿಂದ ಬರಬೇಕಾದ ತಮ್ಮ ಸಂಪತ್ತಿನ ಹಂಚಿಕೆ, ಮೀಸಲಾತಿಯನ್ನು ಪಡೆಯಲು ದಲಿತರ

ಮೇಲಿನ ದೌರ್ಜನ್ಯವನ್ನು ವಿರೋಧಿಸಲು ಹೋರಾಟವನ್ನು ಒಂದು ಅಸ್ತ್ರವಾಗಿ ಇಂದೂ ಸಹ ಬಳಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಈ ರೀತಿಯ ಹೋರಾಟ ಎರಡೂ ಆತ್ಮಕತೆಗಳಲ್ಲೂ ಸಹಜವಾಗಿ ನಿರೂಪಿತವಾಗಿರುವುದನ್ನು ನಾವು ಕಾಣಬಹುದಾಗಿದೆ. ವಿದ್ಯಾರ್ಥಿದೆಸೆಯಿಂದಲೆ ಹೋರಾಟಗಾರರಾಗಿ ರೂಪು ಪಡೆಯುವುದು ಅನ್ಯಾಯದ ವಿರುದ್ಧ ಹೋರಾಡುವುದು ಕಂಡುಬರುತ್ತದೆ. ಈ ಇಬ್ಬರು ಆತ್ಮ ಕಥನಕಾರರು ದಲಿತ ಸಂಘರ್ಷ ಸಮಿತಿಯ ಸದಸ್ಯರಾಗಿ ಕಾಣಿಸಿಕೊಂಡಿದ್ದಾರೆ. ಇವರ ಹೋರಾಟ ಮೊದಲಿಗೆ ಹಾಸ್ಟೆಲ್‌ನಲ್ಲಿ ದಲಿತರಿಗೆ ಆಗುವ ಅನ್ಯಾಯವನ್ನು ಪ್ರತಿಭಟಿಸುವುದರ ಮೂಲಕ ತಮ್ಮ ಹಕ್ಕನ್ನು ಪಡೆಯಬಹುದೆಂಬ ನಂಬಿಕೆಯಿಂದ ಹೋರಾಟ ದಲಿತರಲ್ಲಿ ಅನಿವಾರ್ಯವಾಗಿ ಬಂದುಬಿಡುತ್ತದೆ.

ಶೋಷಣೆಯೆಂಬುದು ದಲಿತ ಆತ್ಮಕತೆಗಳಲ್ಲಿ ಕಂಡುಬರುವ ಮತ್ತೊಂದು ಅಂಶವಾಗಿದೆ. ದಲಿತರನ್ನು ಅನಾದಿಕಾಲದಿಂದಲೂ ಶೋಷಿಸಿಕೊಂಡು ಬರುತ್ತಿದ್ದಾರೆ. ಇದನ್ನು ತಪ್ಪಿಸಲು ವರ್ಗ ಪ್ರಜ್ಞೆಯನ್ನು ಮೂಡಿಸುವಲ್ಲಿ ಎರಡು ಆತ್ಮಕತೆಗಳ ಪ್ರಭಾವ ದಲಿತರ ಮೇಲೆ ಹೆಚ್ಚಾಗಿ ಆಗಿರುವುದನ್ನು ನಾವು ನೋಡಬಹುದು, ತನ್ನ ಸಮುದಾಯದ ಪಾಪ ಪ್ರಜ್ಞೆಯನ್ನು ತಡೆಯುವಲ್ಲಿ ದಲಿತ ಆತ್ಮ ಕಥೆಗಳ ಪ್ರತಾಪವನ್ನು ಹೆಚ್ಚು ಶಕ್ತಿಯುತವಾಗಿ ಮಾಡಬಹುದೆಂಬ ನಂಬಿಕೆಯಿದೆ.

'ಊರುಕೇರಿ' ಕೃತಿಯಲ್ಲಿ ದಲಿತ ಸಾಂಸ್ಕೃತಿಕ ರಾಜಕಾರಣ ಪ್ರಜ್ಞಾಪೂರ್ವಕವಾಗಿ ನಂಬಿಕೊಂಡಿರುವ ಅನೇಕ ಕೀಳರಿಮೆಗಳನ್ನು ಕಾಲೆಳೆದು ಬೀಳಿಸುತ್ತದೆ. ಉದಾಹರಣೆಗೆ : ದಲಿತರಿಗೆ ಗತಕಾಲದ ಸಂಸ್ಕೃತಿಯಲ್ಲಿ ಹಿರಿಮೆಯ ಪಾಲುದಾರಿಕೆ ಇಲ್ಲ ಎಂಬ ನಂಬಿಕೆಯನ್ನು ಸಿದ್ದಲಿಂಗಯ್ಯ ತಮ್ಮ ದೊಡ್ಡಪ್ಪನ ಬಗ್ಗೆ ಬರೆಯುತ್ತಾ ಹಂಗಿಸುತ್ತಾರೆ. ಆದರೆ ನೇರವಾಗಿ ಅಲ್ಲ. ದೊಡ್ಡಪ್ಪ ಕೇರಿಯ ನಾಯಕನಾಗಿ ಇಡೀ ಊರಲ್ಲಿ ಗಣ್ಯನಾದವನು, ಎಲ್ಲಕ್ಕಿಂತ ಮುಖ್ಯವಾಗಿ ಆತ ಜೈಮಿನಿಭಾರತವನ್ನು ಓದುತ್ತಿದ್ದ ವ್ಯಕ್ತಿ, ಆದರೆ ರಾಜಕಾರಣ ದಲಿತ ವರ್ಗಕ್ಕೂ ಬೇಕಾದ ಒಂದು ಮುಖ್ಯ ಅಂಶವಾಗಿ ಅಂದಿನ ಕಾಲದಲ್ಲಿ ದಲಿತರು ಸ್ಪರ್ಧಿಸಿ ಗೆಲ್ಲಬಹುದೆಂಬ ನಂಬಿಕೆಗೆ ಈ ಪ್ರಸಂಗ ಸಾಕ್ಷಿಯಾಗಿದೆ.[೧]

---

೧. ಬಡವರ ನಗುವಿನ ಶಕ್ತಿ, ಸಂಗ್ರಹ : ಎಲ್.ದಂಡಪ್ಪ, ಪು. ೨೬೦.

ಆದರೆ 'ಮಣೆಗಾರ' ಆತ್ಮಕತೆಯಲ್ಲಿ ಈ ರೀತಿಯ ರಾಜಕಾರಣದ ಪ್ರವೇಶವಿಲ್ಲ. ಕಥನಕಾರ ಬೆಳೆದಂತೆ ಅವರು ದಲಿತ ಸಂಘರ್ಷ ಸಮಿತಿಯ ಸದಸ್ಯರಾಗಿರುವುದೊಂದೇ ಪ್ರಸಂಗ ಕಾಣಿಸಿಕೊಳ್ಳುತ್ತದೆ. ಆದರೆ ಊರುಕೇರಿ ಆತ್ಮಕತೆಯಲ್ಲಿ ನಿಷೇಧವಿದ್ದ ಕಾಲಘಟ್ಟದಲ್ಲಿ ಅದನ್ನು ಮೀರಿ ನಡೆಯಬಹುದೆಂಬುದಕ್ಕೆ ಸಾಕ್ಷಿಯಾಗಿ ದೊಡ್ಡಪ್ಪನ ಪ್ರಸಂಗ ಕಾಣಿಸಿಕೊಳ್ಳುತ್ತದೆ. ಇದಕ್ಕೆ ಕಾರಣ ನಗರ ಪ್ರದೇಶ ಹತ್ತಿರ ಇದ್ದರಿಂದ ಈ ರೀತಿಯ ಬೆಳವಣಿಗೆ ಕಾಣಿಸಿಕೊಳ್ಳುತ್ತದೆ. ಹಾಗೆಯೇ ಮಣೆಗಾರದಲ್ಲಿ ಈ ರೀತಿ ಕಾಣಿಸಿಕೊಳ್ಳುವುದಿಲ್ಲ.

ಊರುಕೇರಿ ಆತ್ಮಕತೆಯಲ್ಲಿ ನಗರದ ಮತ್ತು ಗ್ರಾಮೀಣ ಬದುಕಿನ ಮುಖಾಮುಖಿಯನ್ನು ಗುರುತಿಸಬಹುದು, ತನ್ನ ಬಾಲ್ಯ ಕಾಲದ ಜೀವನವನ್ನು ಮಂಚನ ಬೆಲೆಯ ಸುತ್ತಲಿನ ಹಳ್ಳಿಯ ಜೀವನವನ್ನು ಕಾಣಬಹುದಾಗಿದೆ. ಅಂದರೆ ಬಾಲ್ಯದ ಕಾಲ ಎನ್ನುವುದು ಸಮೃದ್ಧವಾಗಿ ಅರಳುವ ಕಾಲ, ತಾನು ಅನುಭವಿಸಿದ ನೋವನ್ನು ತನ್ನ ತಂದೆ ಮನೆ ಬಿಟ್ಟು ಹಳ್ಳಿಯ ಜೀವನವನ್ನು ತೊರೆದು ಪಟ್ಟಣ ಸೇರುವುದು ಹಾಗೆಯೇ ಮಾಗಡಿ ಪರಿಸರದ ಸುತ್ತಲಿನ ಬದುಕನ್ನು ಇಲ್ಲಿ ಸಂಕಥನಗೊಳಿಸಿರುವುದು ಕಂಡುಬರುತ್ತದೆ.

'ಮಣೆಗಾರ' ಆತ್ಮಕತೆಯಲ್ಲಿ ತನ್ನ ಪೂರ್ಣ ಬದುಕಿನ ಪೂರ್ಣ ಜೀವನವನ್ನು ತುಮಕೂರಿನ ಪಕ್ಕದಲ್ಲಿರುವ ಗೊಲ್ಲಹಳ್ಳಿ ಪರಿಸರದ ಕಥೆಯಾಗಿ ಸಮುದಾಯವನ್ನು ಪ್ರತಿನಿಧಿಸುವುದರಲ್ಲಿ ಈ ಗ್ರಾಮೀಣ ಬದುಕನ್ನು ನಮ್ಮ ಮುಂದೆ ತೆರೆದಿಡುತ್ತದೆ. ತಾವು ಕಳೆದಂತಹ ಜೀವನವನ್ನು ವ್ಯಕ್ತಮಾಡುವುದರಲ್ಲಿ ಭಿನ್ನವೆಂದು ಗುರ್ತಿಸಬಹುದು. "ಯಾವುದೇ ಹಳ್ಳಿಯಲ್ಲಿ ದಲಿತರ ಮೇಲೆ ನಡೆದ ದೌರ್ಜನ್ಯದ ಬಗ್ಗೆ ಚರ್ಚೆ" ದಲಿತ ಕಾರ್ಯಕರ್ತರ ಚರ್ಚೆಗಳಲ್ಲಿ ಆಗುವ ಹಾಗೆ ದಲಿತ ಸಮಷ್ಟಿಯ ಅನುಭವಗಳ ವ್ಯಾಖ್ಯಾನ ನಡೆಯುತ್ತಿತ್ತು. ಅಲ್ಲಿ ಸೃಷ್ಠಿಯಾದ ಕೋಪ, ಆದೇಶಗಳ ಭಾವನಾ ವಾತಾವರಣಕ್ಕೂ ನಾನು ಓದುತ್ತಿದ್ದ ಪುಟಗಳಲ್ಲಿನ ಧ್ವನಿಗೂ ಇದ್ದ ವ್ಯತ್ಯಾಸ ಥಟಕ್ಕನೆ ಮನಸ್ಸಿಗೆ ಹೊಳೆಯಿತು, ಇಬ್ಬರ ಅನುಭವಗಳು ಒಂದೇ ಆದರೆ ಅದನ್ನು ಕಂಡು ವರ್ಣಿಸುತ್ತಿರುವ ಧ್ವನಿಗಳು ಮಾತ್ರ ಬೇರೆ ಬೇರೆ, ದಲಿತ ಹೋರಾಟಗಾರರದು

ಸಮಷ್ಟಿಯ ಕೋಪ ಸಿದ್ಧಲಿಂಗಯ್ಯನವರ ಧ್ವನಿ ಸೃಜನಶೀಲ ಸಾಹಿತಿಯ ವಿಶಿಷ್ಟ ಧ್ವನಿ, ತನ್ನ ವಿಶಿಷ್ಟ ಧ್ವನಿ ತನ್ನ ವಿಶಿಷ್ಟತೆಯನ್ನು ಊರುಕೇರಿಯಲ್ಲಿ ಒತ್ತಿ ಹೇಳಿದ್ದಾರೆ." [೧]

ಸಿದ್ಧಲಿಂಗಯ್ಯ ಮತ್ತು ರಾಮಯ್ಯ ಈ ಇಬ್ಬರು ಆತ್ಮಕತೆಗಾರರು, ಸಮಕಾಲೀನ ಸಮಾಜದ ಅಂಕು-ಡೊಂಕುಗಳನ್ನು ನಿರಾಯಾಸವಾಗಿ ನಿರೂಪಿಸಿದ್ದಾರೆ. ಭಾಷಾ ಶೈಲಿ, ಅನುಭವ, ಆತ್ಮವಿಶ್ವಾಸ ಇತ್ಯಾದಿಗಳನ್ನು ನೇರವಾಗಿ ಹೇಳಿದ್ದಾರೆ. ಯಾವ ಅಂಜು ಅಳುಕಿಲ್ಲದೆ ಎದೆಗಾರಿಕೆಯ ಮನೋಭಾವದಿಂದ ತಾವು ಕಂಡು ಅನುಭವಿಸಿದ ಕೇಳಿದ ದಲಿತಾನುಭವಗಳನ್ನೇ ತಮ್ಮ ಆತ್ಮಕತೆಗಳಲ್ಲಿ ನಿರೂಪಿಸುತ್ತಾರೆ.

ಸಿದ್ಧಲಿಂಗಯ್ಯನವರು ತಮ್ಮ ಭಾಗ-೨ ಆತ್ಮಕತೆಯಲ್ಲಿ ಮೊದಲ ಭಾಗದಲ್ಲಿ ದಟ್ಟವಾದ ದಲಿತರ ಅನುಭವಗಳು ನಿರೂಪಣೆಗೊಂಡರೆ ಭಾಗ ಎರಡರಲ್ಲಿ ಅದರ ಮುಂದುವರೆದ ಭಾಗವಾಗಿ ನಿರೂಪಿಸಿದ್ದಾರೆ. ಅಂಬೇಡ್ಕರ್ ಬದುಕಿದ್ದ ಕಾಲದಲ್ಲಿ ಕೆರೆನೀರು ಬಳಕೆ ಮತ್ತು ದೇವಾಲಯ ಪ್ರವೇಶಕ್ಕೆ ತಮ್ಮ ಸಂಘಟಕರೊಂದಿಗೆ ಪ್ರವೇಶಿಸುವಂತೆ ಸಿದ್ಧಲಿಂಗಯ್ಯನವರು ಭಾಗ ಎರಡು ಆತ್ಮಕತೆಯಲ್ಲಿ ಬೆಂಗಳೂರಿನ ಪಕ್ಕದ ಹಳ್ಳಿಯೊಂದರ ದೇವಸ್ಥಾನ ಪ್ರವೇಶವನ್ನು ತಮ್ಮ ಹಿಂಬಾಲಕರೊಂದಿಗೆ ಪ್ರವೇಶಿಸುತ್ತಾರೆ. ಅದರ ಪರಿಣಾಮವಾಗಿ ಹಲವಾರು ದಲಿತ ಸಂಘಟಿಕರು ಮತ್ತು ಸವರ್ಣೀಯರ ನಡುವೆ ಜಗಳ ನಡೆದು ಹೋಗುತ್ತದೆ. ಅಂತಹ ಭೀಕರ ಅನುಭವಗಳು ರಾಮಯ್ಯನವರ ಮಣೆಗಾರದಲ್ಲಿ ಇರಲಿಕ್ಕಿಲ್ಲ. ಮಣೆಗಾರ ಜಾತಿಯ ಜನರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಮಸ್ಯೆಗಳು ಕಂಡುಬಂದಿವೆ. ಸಿದ್ಧಲಿಂಗಯ್ಯನವರು ಒಬ್ಬ ದಲಿತ ಕವಿಯಾಗಿ ರೂಪುಗೊಂಡಿರುವ, ಗೊಳ್ಳುತ್ತಿರುವ, ಅಂಶಗಳು ಕಂಡುಬಂದಿದೆ. ಸಂಘಟನೆಯಲ್ಲಿ ತೊಡಗಿಸಿಕೊಂಡು ಸಂಘಟಕರ ಜೊತೆಯಲ್ಲಿ ಹಲವಾರು ಧರಣಿ, ಚಳುವಳಿ, ಸತ್ಯಾಗ್ರಹ ಇತ್ಯಾದಿ ಅಹಿಂಸಾದಿ ಹೋರಾಟಗಳನ್ನು ನಡೆಸಿದ್ದಾರೆ ಆದರೆ ಅಹಿಂಸೆಯ ತತ್ವ ಕೆಲವು ಸಲ ತದ್‌ವಿರುದ್ಧವಾಗಿಯೂ ನಡೆಯುತ್ತಿತ್ತು. ಅಂದರೆ ಸಿದ್ಧಲಿಂಗಯ್ಯನವರು ನಮ್ಮ ಜೋಡಿ ಇದ್ದರೆಂಬ ಧೈರ್ಯದಿಂದ ಸಂಘಟನಾಕಾರರು ಜಗಳವನ್ನು ಮಾಡಿದ್ದಾರೆ ಸಾಹಿತ್ಯ ಸಮ್ಮೇಳನಗಳು, ಕವಿಗಳು, ಲೇಖರೊಂದಿಗೆ ದಲಿತ ಚಿಂತನೆಯ ಚರ್ಚೆಗಳು ಭಾಗ-೨ ರಲ್ಲಿ

---

೧. ಬಡವರ ನಗುವಿನ ಶಕ್ತಿ, ಸಂಗ್ರಹ : ಎಲ್.ದಂಡಪ್ಪ, ಪು. ೨೬೪.

ದಾಖಲಾಗಿವೆ. ದೇವನೂರು, ಕಾಳೇಗೌಡ ನಾಗವಾರ, ಮುಳ್ಳೂರು ನಾಗರಾಜು ಇತ್ಯಾದಿ. ದಲಿತ ಚಿಂತಕರೊಂದಿಗೆ ದಲಿತ ಚಿಂತನೆಗಳನ್ನು ನಡೆಸಿದ್ದರೆ ಸಾಹಿತ್ಯ ಸಮ್ಮೇಳನಗಳು, ಅವುಗಳಲ್ಲಿ ಭಾಗವಹಿಸಿದ್ದ ಘಟನೆಗಳು ಭಾಗ-೨ ರಲ್ಲಿ ದಾಖಲಾಗಿವೆ.

ಸಿದ್ದಲಿಂಗಯ್ಯನವರ ವಿಶಿಷ್ಟತೆ ಅವರ ಶೈಲಿಯಲ್ಲಿದೆ. ಇಲ್ಲಿ ಅತ್ಯಂತ ಬುದ್ಧಿವಂತ ತುಂಟನೊಬ್ಬ ವ್ಯಂಗ್ಯ ಪ್ರಬಂಧ ಧ್ವನಿ ಇತ್ಯಾದಿಗಳನ್ನು ಬಳಸಿ ಹೊಸ ಬಗೆಯ ಆತ್ಮ ಪ್ರತಿಮೆಗಳನ್ನು ಸೃಷ್ಟಿಸಿದ್ದಾರೆ. ಭಾರತವು ನಾಗರಿಕತೆಯಾಗಿ ಪಶ್ಚಿಮದ ಎದುರಿಗೆ ಹೊಸರೀತಿಯ ಆತ್ಮವಿಶ್ವಾಸವನ್ನು ಸೃಷ್ಟಿಸಿಕೊಳ್ಳಬೇಕು. ಭಾರತೀಯ ಸಮಾಜದಲ್ಲಿ ಅವಮಾನಿತ ವರ್ಗಗಳ ಪರಾಜಿತ ಗುಂಪುಗಳು ಪ್ರತಿಷ್ಠಿತರ ಎದುರಿಗೆ ಹೊಸ ರೀತಿಯ ಆತ್ಮವಿಶ್ವಾಸವನ್ನೇ ಸೃಷ್ಟಿಸಿಕೊಳ್ಳಬೇಕು. ದಲಿತರ ಬದುಕನ್ನು ಹೊಸ ರೀತಿಯಲ್ಲಿ ಪ್ರತಿಮೀಕರಿಸುವುದಕ್ಕೆ ಅವರು ಬಳಸಿರುವ ಶೈಲಿ ಮತ್ತು ಭಾಷೆಯ ಬಳಕೆ.

ತುಂಬಾಡಿ ರಾಮಯ್ಯ ಅವರ ಆತ್ಮಕತೆ "ಮಣೆಗಾರ" ಇಂದಿನ ಕಾಲದಲ್ಲಿ ವಿಶಿಷ್ಟತೆಯನ್ನು ಮೆರೆದಿದ್ದಾರೆ. ಚಿರಪರಿಚಿತ ವ್ಯಕ್ತಿ ಬರೆಯುವುದಕ್ಕೂ, ಅಪರಿಚಿತ ವ್ಯಕ್ತಿ ಬರೆಯುವುದಕ್ಕೂ ವ್ಯತ್ಯಾಸ ಗುರ್ತಿಸಬಹುದು. ಇದಕ್ಕೆ ಮುಖ್ಯ ಅವರ ಆತ್ಮಕತೆಯಲ್ಲಿರುವ ಚಿತ್ರಕ ಶಕ್ತಿಯಿಂದ ವಿಶಿಷ್ಠರಾಗುತ್ತಾರೆ. ತಾವು ಕಂಡಿದ್ದನ್ನು ಅನುಭವಿಸಿದ್ದನ್ನು ಮೆಲು ದನಿಯಲ್ಲಿ ನಿರೂಪಿಸುವ ರೀತಿ, ಎಲ್ಲಾ ಅವರು ದನಿ ಎತ್ತರಿಸಿ ಮಾತನಾಡುವುದಿಲ್ಲ. ಸನ್ನಿವೇಶಗಳನ್ನು ವೈಭವೀಕರಿಸುವ ಗೋಜಿಗೆ ಹೋಗುವುದಿಲ್ಲ. ಈ ಬಗೆಯ ಪ್ರಾಮಾಣಿಕತೆ ಕೃತಿಯಲ್ಲಿ ಕಾಣಿಸಿಕೊಳ್ಳುತ್ತದೆ. ತಾನು ಮುಜುಗರಕ್ಕೆ ಒಳಗಾಗಬೇಕಾಗಿರುವ ಪ್ರಸಂಗವನ್ನು, ಸನ್ನಿವೇಶಗಳನ್ನು ಅವರು ಆತ್ಮಸಂಯಮದಿಂದ ತಡೆದು ಹೇಳುತ್ತಾರೆ. ರಾಮಯ್ಯ ಅವರು ತುಂಬಾ ಸಂಕೋಚದ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾರೆ. ಅವರ ಆತ್ಮಕಥನದ ತುಂಬಾ ವ್ಯಕ್ತಿ ಚಿತ್ರಗಳಿವೆ. ತಾನು ವ್ಯಕ್ತಿಗಳ ಸನ್ನಿವೇಶಗಳ ಮುಖಾಮುಖಿಯಾಗಿ ತಮ್ಮನ್ನು ತೆರೆದಿಡುತ್ತಾರೆ."[೧]

ಸಿದ್ಧಲಿಂಗಯ್ಯನವರು ಮತ್ತು ತುಂಬಾಡಿ ರಾಮಯ್ಯ ಇಬ್ಬರೂ ಆತ್ಮಕಥನಗಾರರು ಸಮಕಾಲೀನ ಸನ್ನಿವೇಶಗಳನ್ನು ದಲಿತರ ಸಾಮಾಜಿಕ, ಧಾರ್ಮಿಕ ಆರ್ಥಿಕ ಪರಿಸ್ಥಿತಿಗಳನ್ನು ತಪ್ಪು ಜೀವನಾನುಭವದ ಜೊತೆ ಜೊತೆಯಲ್ಲಿಯೇ

---

೧. ದಲಿತಮಾರ್ಗ ಸಂಗ್ರಹ : ಡಾ. ಅರವಿಂದ ಮಾಲಗತ್ತಿ, ಪು. ೩೯೬.

ನಿರೂಪಿಸಿದ್ದಾರೆ. ಅಂತೆಯೇ ದಲಿತ ಸಂವೇದನೆಯನ್ನು ಕಟ್ಟಿಕೊಟ್ಟಿದ್ದಾರೆ. ದಲಿತ ಸಾಂಸ್ಕೃತಿಕತೆಯನ್ನು ಅಲ್ಲಗಳೆದಿರುವ ಭಾರತೀಯ ಸಮಾಜದ ಕಟ್ಟುಪಾಡುಗಳನ್ನು ವೇದನಾನುಭವದೊಂದಿಗೆ ಉಲ್ಲೇಖಿಸುತ್ತಾರೆ. ಇಬ್ಬರು ಆತ್ಮಕಥನಕಾರರು ಕೂಡ ದಲಿತ ಸಂವೇದನೆಯನ್ನು ನಿರೂಪಿಸುತ್ತಾರೆಯೇ ಹೊರತು ಅವೇಗ, ಆಕ್ರೋಶ, ದೊಂಬಿ, ಗಲಾಟೆಯಂತಹ ಚಟುವಟಿಕೆಗಳಲ್ಲಿ ತೊಡಗಿಕೊಳ್ಳದೆ. ಆ ಎಲ್ಲಾ ಅನುಭವಗಳನ್ನು ಬರೆಯುತ್ತಾರೆ. ಇಬ್ಬರೂ ಕೂಡ ದಲಿತ ನೋವುಗಳನ್ನು ಅನುಭವಿಸಿದ್ದರೂ ಕೂಡ "ಸೌಮ್ಯ ಸ್ವಭಾವ" ದ ವ್ಯಕ್ತಿಗಳಾಗಿ ಕಂಡುಬಂದಿದ್ದಾರೆ. ಮಡಿ ಮೈಲಿಗೆಯಂತಹ ಭೀಕರತೆಯನ್ನು ತಮ್ಮ ಜೀವನದಲ್ಲಿ ಅನುಭವಿಸಿದ್ದರೂ ಕೂಡ ಅಕ್ರೋಶದ, ನಿಟ್ಟಿನ ಮಾತುಗಳನ್ನು ಎಲ್ಲಿಯೂ ಆಡುವುದಿಲ್ಲ ಸೌಮ್ಯ ಸ್ವಭಾವದ ಈ ಇಬ್ಬರು ಆತ್ಮಕಥನಕಾರರ ನಿರೂಪಣಾ ಶೈಲಿ ಬಹಳ ಚಿಂತನೆಗೆ ಓದುಗರನ್ನು ಒಳಗು ಮಾಡುತ್ತದೆ. ಸೌಮ್ಯ ಸ್ವಭಾವ ಈ ಇಬ್ಬರು ಆತ್ಮಕಥನಕಾರರ ಚಿಂತನೆಗಳು ಒಂದೇ ಆಗಿದ್ದರೂ ಕೂಡ ನಿರೂಪಣಾ ವಿಧಾನ ಸ್ವಲ್ಪ ಭಿನ್ನವಾಗಿವೆ.

ಈ ಎರಡು ಆತ್ಮಕತೆಗಳಲ್ಲಿ ಕೆಲವೊಂದು ವೈದೃಶ್ಯಗಳು ಇರುವಂತೆ ಸಾದೃಶ್ಯಗಳೂ ಇವೆ. ಆದರೆ ಸಾದೃಶ್ಯಗಳೇ ಹೆಚ್ಚು ಬಡತನ, ಹಸಿವು, ಜಾತಿ ಶೋಷಣೆ, ಶಿಕ್ಷಣ, ಹೊರಾಟ ಇವು ಎರಡಲ್ಲೂ ಕಾಣಿಸಿಕೊಂಡರೂ ಬೇರೆ ಬೇರೆ ಪರಿಸರದಿಂದ ಬಂದವುಗಳಾಗಿವೆ. ಆದರೆ ಶೈಲಿಯನ್ನು ತಮ್ಮದೇ ಆದ ರೀತಿಯಲ್ಲಿ ಬಳಸಿದ್ದಾರೆ. ಮತ್ತು ಭಾಷೆಯಲ್ಲಿ ತಮ್ಮ ಪ್ರಾದೇಶಿಕತೆಯನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ. ದಲಿತರ ಕಷ್ಟಕೋಟಲೆಗಳನ್ನು ದೂರ ದೃಷ್ಟಿಯಿಂದ ಹಕ್ಕಿ ನೋಟದಿಂದ ಇವರು ನೋಡಿದ್ದಾರೆ. ಆ ಹಕ್ಕಿ ನೋಟದ ನೆನಪುಗಳನ್ನು ಆತ್ಮಕತೆಗಳಲ್ಲಿ ಪೋಣಿಸಿದ್ದಾರೆ. 'ಮಣೆಗಾರ' ಆತ್ಮಕತೆಯ ಇಲ್ಲಿಯವರೆಗೆ ದಲಿತ ಸಾಹಿತ್ಯದಲ್ಲಿ ಬಂದಿರುವ ಆತ್ಮಕತೆಗಳಿಗೆ ಭಿನ್ನವಾಗಿ ನಿಲ್ಲುತ್ತದೆ. ಆತ್ಮಕತೆಯಲ್ಲಿ ಚಿತ್ರಗಳನ್ನು ನೋಡಿ ಅದರಿಂದ ಪಡೆಯುವ ಅನುಭವ ವಿಶಿಷ್ಟವಾಗಿದೆ. ಈ ನೆಲೆಯಲ್ಲಿ ವಿಶಿಷ್ಟತೆಯನ್ನು ಈ ಆತ್ಮಕತೆಯು ಸಾಧಿಸಿದೆ ಎಂದು ಹೇಳಬಹುದು.

ಸಿದ್ಧಲಿಂಗಯ್ಯ ಮತ್ತು ತುಂಬಾಡಿ ರಾಮಯ್ಯ ಈ ಇಬ್ಬರು ಬರಹಗಾರರು ಚಿಂತಿಸಿರುವ ದಲಿತ ಚಿಂತನೆಗಳು ಒಂದೇ ಆಗಿದ್ದು ಅವು ಸಮಾಜಮುಖಿ

ಯಾದಂತಹವುಗಳಾಗಿವೆ. ಚಲನಾತ್ಮಕ ಸಮಾಜದ ಕಟುಟೀಕೆಯ ನಿರೀಕ್ಷೆಯನ್ನು ಇವರು ಹೊಂದಿದ್ದಾರೆಂಬುದು ಅಕ್ಷರ ಸಹ ದಿಟವಾಗಿದೆ. ಸಮಾಜಮುಖಿ ಚಿಂತನೆ ಮತ್ತು ಅದರ ಕ್ರಿಯಾಶೀಲ ಅಭಿವೃದ್ಧಿಯ ಕಡೆಗೆ ಈ ಎರಡು ಮನಸ್ಸುಗಳು ಮುಖ ಮಾಡಿರುತ್ತವೆ ಭಾರತೀಯ ವ್ಯವಸ್ಥೆಯಲ್ಲಿ ಜಾತಿಯ ಕಟ್ಟುವಿಕೆ ಕಡಿಮೆಯಾಗಲಿ ಎಂಬುದನ್ನು ಇವರು ಬಯಸುತ್ತಾರೆ.

ಒಟ್ಟಾರೆಯಾಗಿ ಈ ಇಬ್ಬರೂ ಆತ್ಮಕಥನಗಾರರ ಚಿಂತನೆಗಳು ನವಸಮಾಜದ, ಜಾತ್ಯತೀತ ಸಮಾಜದ ನಿರ್ಮಾಣಕ್ಕೆ ಕಾಲೆತ್ತಿ ನಿಂತಿವೆ ಎಂಬುದು ಸತ್ಯವಾಗಿದೆ.

# ಅಧ್ಯಾಯ - ೮

# ಅಧೀನ ಸಂಸ್ಕೃತಿಯ ನೆಲೆಯಲ್ಲಿ ಪ್ರಧಾನತ್ವದ ಅಂಶಗಳು

ಇಂಡಿಯಾದ ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ಪೃಶ್ಯತೆ ಎಂಬ ನೀಚ ವ್ಯವಸ್ಥೆಯೊಂದು ರೂಢಿಗತವಾಗಿದ್ದು ಶತ-ಶತಮಾನಗಳಿಂದ ಅಪಮಾನ , ನೋವು, ಸಂಕಟ, ಕಷ್ಟ-ಕೋಟಲೆಗಳನ್ನು ಶೂದ್ರ ಜನಾಂಗದವರು ಅನುಭವಿಸುತ್ತಿದ್ದಾರೆ. ಜಾತಿಯ ಹೆಸರಿನಲ್ಲಿ ಜೀತಪದ್ಧತಿ, ಕೆಳದರ್ಜೆಯ, ಮಲಿನ ಕೆಲಸಗಳನ್ನು ದಲಿತರೇ ಮಾಡಬೇಕು ಅವರು ಬ್ರಹ್ಮನ ಪಾದಗಳಿಂದ ಜನಿಸಿದವರು. ಕಪ್ಪು ಬಣ್ಣದವರು ಇತ್ಯಾದಿ ಕಾರ್ಯಗಳಲ್ಲಿ ಕಾರ್ಯ ನಿರ್ವಹಿಸಬೇಕು. ಉತ್ತಮ ದರ್ಜೆಯ ಜೀವನವನ್ನು ಮಾಡಬಾರದು ಸವರ್ಣೀಯರ ಬೀದಿಗಳಲ್ಲಿ ತಿರುಗಾಡಬಾರದು, ಕಾಳಿ, ಮಸಣಿ, ಮಾರಮ್ಮ ಇತ್ಯಾದಿ ಸ್ತ್ರೀ ದೇವತೆಗಳನ್ನು ಮಾತ್ರ ಪೂಜಿಸಬೇಕು. ಊರ ಹೊರಗಿನಲ್ಲಿ ಮನೆಮಾಡಿಕೊಂಡು ವಾಸಿಸಬೇಕು. ಉತ್ತಮರ ಕೆರೆ, ಬಾವಿ, ಕಟ್ಟೆಗಳನ್ನು ಬಳಸಿಕೂಡದು, ವಾಹನಗಳಲ್ಲಿ ಸವಾರಿ ಮಾಡಬಾರದು ಎಂಬ ಇತ್ಯಾದಿ ಸಮಾಜದಲ್ಲಿ ಇಲ್ಲದೆ ಇರುವ ನಿರ್ಬಂಧಗಳನ್ನು ಹುಟ್ಟಿಸಿಕೊಂಡು ಅವುಗಳನ್ನು ಅನುಸರಿಸುತ್ತಾ ಅನಾಧಿಕಾಲದಿಂದಲೂ ಬಂದಿದ್ದಾರೆ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ಎಂಬ ವರ್ಣ ವ್ಯವಸ್ಥೆಗಳನ್ನು ಹುಟ್ಟುಹಾಕಿಕೊಂಡು ಅವುಗಳನ್ನು ಎಡೆಬಿಡದೆ ಅನುಸರಿಸಿಕೊಂಡು ಬಂದಿದ್ದಾರೆ.

ಅಸ್ಪೃಶ್ಯರು ಹಸುವಿನ ಹಾಲನ್ನು ಕರೆಯಕೂಡದು, ಆದರೆ ಅದರ ಪೋಷಣೆ, ರಕ್ಷಣೆಗಳು ಪಾಲಕನಿಗೆ ಮಾತ್ರ ಮಾಲೀಕನಿಗಲ್ಲ. ಏನಾದರೂ ದಲಿತರು ಹಾಲನ್ನು ಹಿಂಡಿದರೆ ರಕ್ತವನ್ನು ಕರೆಯುತ್ತದೆಂಬ ಮೂಢನಂಬಿಕೆಯ ಬೀಜವನ್ನು ಒತ್ತಿದ್ದರು. ವಿಷ್ಣು, ಶಿವ, ಈಶ್ವರ, ನಾರಾಯಣ, ರಾಮ, ಇತ್ಯಾದಿ ದೇವತೆಗಳನ್ನು ದಲಿತರು ಹೊರಡಬಾರದು, ಧಾರ್ಮಿಕ ಪೂಜಾ ಕ್ಷೇತ್ರಗಳಿಗೆ ದಲಿತರು ಪ್ರವೇಶ ಮಾಡಬಾರದು ಎಂದು ನಿಷೇದಾಜ್ಞೆಯನ್ನು ಒಂದು ಕಲಕ್ಕೆ ಹೇರಲಾಗಿತ್ತು. ಸಮಾಜದಲ್ಲಿ ಜನರು ನಲುಗಿಹೋಗಿದ್ದರು. ನಗುವ ಮುಖಗಳೇ ದಲಿತರಲ್ಲಿ ಇಲ್ಲದಂತಾಗಿದ್ದರು ಸೊತ ಮೋರೆಯಲ್ಲಿ ಜನತೆ ವಾಸಿಸುತ್ತಿದ್ದರು. ಬದುಕಿನ ಅಸಾದ್ಯ ಚಿಂತನೆಗಳಲ್ಲಿ ತೊಡಗಿ ಕಂಗಾಲಾಗಿದ್ದರು ಅನಾದಿ ಕಾಲದಿಂದಲೂ ಅನುಭವಿಸುತ್ತಾಬಂದಂತಹ ನರಕ ಸದೃಶ ಸಮಸ್ಯೆಗಳು ಯೂರೋಪಿಯನ್ನರ ಆಗಮನದ ನಂತರದಲ್ಲಿ ಹೊಸ ಆವಿಷ್ಕಾರ,

ಚಿಂತನೆಗಳು ಭಾರತದಲ್ಲಿ ನಡೆದವು. ಬ್ರಿಟೀಷರ ಆಗಮನದ ನಂತರ ಭಾರತದಲ್ಲಿ ಶಿಕ್ಷಣ ವ್ಯವಸ್ಥೆ ಚಲನಾಶೀಲತೆಯನ್ನು ಪಡೆಯಿತು. ಇದರ ತತ್ ಪರಿಣಾಮವಾಗಿ ಭಾರತೀಯರು ಅಕ್ಷರಸ್ಥರಾದರು. ಜ್ಞಾನವಂತರಾದರು. ಕಾಲದಿಂದ ಕಾಲಕ್ಕೆ ಈ ಬೆಳವಣಿಗೆ ಅಭಿವೃದ್ಧಿಯನ್ನು ಹೊಂದಿ ಇಂಗ್ಲಿಷ್, ಮರಾಠಿ, ಬಂಗಾಳಿ ಸಾಹಿತ್ಯಗಳು ಸೃಷ್ಟಿಯಾದವು ನಂತರ ಭಾರತೀಯರು ಅಕ್ಷರ ಬಲ್ಲವರಾದರು.

ವಸಾಹತುಷಾಹಿಗಳ ಆಗಮನದಿಂದ ಅದರ ಲಾಭಗಳು ನೊಂದ ಜನಾಂಗಕ್ಕೆ ಅಕ್ಷರಸ್ಥರಾಗಲು ಕಾರಣವಾಯಿತು. ಅಂಬೇಡ್ಕರ್, ಸಾರ್ತ್ರೆ, ಕಮು, ಪೆರಿಯಾರ್ ಇತ್ಯಾದಿ ಚಿಂತಕರು ಜನಿಸಿ ಜಾತಿಯ ಕಟ್ಟನ್ನು ಬಟ್ಟಲು ಆರಂಭಿಸಿದರು. ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿ ಸಮಾಜ ಸುಧಾರಕರು ಜನಿಸಿ ಸಮಾಜದ ಏಳಿಗೆಗೆ ಶ್ರಮಿಸಿದರು.

"ವೇದನೆಗಳನ್ನು ಸಂವೇದನೆಗೊಳಿಸಿ , ಒಂದು ಕಾಲಕ್ಕೆ ನಿಕೃಷ್ಟವೆಂದು ದೂರೀಕರಿಸಿದ್ದ ಕಾಯಕಗಳನ್ನು ಅವುಗಳ ಮೌಲ್ಯ, 'ಗುಣಮಟ್ಟಗಳನ್ನು ಪ್ರತಿಷ್ಠಿತ ಸಂಕೇತದಲ್ಲಿ ನೋಡುವುದೇ ಅಧೀನ ಸಂಸ್ಕೃತಿಯ ಪ್ರಧಾನತ್ವದ ಅಂಶಗಳಾದವು.

ಹನ್ನೆರಡನೇ ಶತಮಾನದಲ್ಲಿ ವಚನಕಾರರು ಬಿತ್ತಿದ ಕಾಯಕ ಯೋಗದ ಬೀಜಗಳು ಕನಕದಾಸರಂತಹ ವ್ಯಕ್ತಿಗಳಿಂದ ಹಿಡಿದು ಇಪ್ಪತ್ತನೇ ಶತಮಾನದ ಎಪ್ಪತ್ತರ ಸಂದರ್ಭದವರೆಗೆ ಹರಿದು ಬಂದು ಅದಕ್ಕೊಂದು ಹೊಸ ಹುಟ್ಟು ಹೆಸರು ಬಂದಿತು. ಅದೇ ಕನ್ನಡದಲ್ಲಿ ದಲಿತ ಸಾಹಿತ್ಯ. ಈ ದಲಿತ ಸಾಹಿತ್ಯ ಸಂವೇದನೆಗಳು ಆತ್ಮಕತೆಯ ರೂಪವನ್ನು ಪಡೆದವು. ಚಪ್ಪಲಿ ಹೊಲೆಯುವುದು. ಬೀದಿ ಕಸ ಗುಡಿಸುವುದು. ಕಲ್ಲು ಹೊಡೆಯುವದು, ಚಪ್ಪಲಿ ಮಾರುವುದು. ಪ್ರಾಣಿಗಳ ಮಲಮೂತ್ರವನ್ನು ಸಾಗಿಸುವುದು,, ಮನೆ ನಿರ್ಮಿಸುವುದು. ರಸ್ತೆ ಕೆಲಸ ಮಾಡುವುದು, ದನ ಎಮ್ಮೆಗಳನ್ನು ಮೇಯಿಸುವುದು. ಮಾಂಸವನ್ನು ತಿನ್ನುವುದು, ಶೌಚಾಲಯಗಳ ಸ್ವಚ್ಛತೆಯನ್ನು ಮಾಡುವುದು. ಇತ್ಯಾದಿ ಕೆಲಸಗಳು ಸಾಮಾಜಿಕ ಅಂತ್ಯಜರಿಗೆ ಮೀಸಲಾಗಿದ್ದವು. ಈ ಎಲ್ಲಾ ಕೆಲಸಗಳು ಸಮಾಜದಿಂದ ತಿರಸ್ಕೃತಗೊಂಡಿದ್ದವು. ಬಚ್ಚಲು ಬಳಿಯುವುದು, ಗಾರೆಕೆಲಸ ಇವೆಲ್ಲವು ಕೂಡ ಕೆಳಹಂತದ ಮನೋಭಾವನೆಯ ಕೆಲಸಗಳಾಗಿದ್ದವು.

ಈ ಮೇಲೆ ಹೇಳಿದ ಕೆಲಸಗಳೆಲ್ಲವೂ ಕೈಲಾಸದ ಕಾಯಕಗಳಾಗಿ ಹನ್ನೆರಡನೇ ಶತಮಾನದಲ್ಲಿ ಮಾರ್ಪಾಡಾದವು. ಕುರುಡು ಧರ್ಮಾಂಧ ನಂಬಿಕೆಗಳು, ಆಚರಣೆಗಳು

ಇವೆಲ್ಲವೂ ಕಾಯಕತ್ವದ ನೆಲೆಯಲ್ಲಿ ಬಂದವುಗಳಾಗಿವೆ. ಯಾವ ಕೆಲಸವು ಕಡಿಮೆಯದಲ್ಲ. ಅದರಲ್ಲಿ ಅದರದೆ ಆದಂತಹ ಗುಣ-ಮೌಲ್ಯಗಳು ಸೇರಿಕೊಂಡಿರುತ್ತವೆ. ಅವು ಮುಖ್ಯವಾಗಿರುತ್ತವೆ. ಆದರೆ ಅವುಗಳಿಗೊಂದು ವಿಶೇಷತೆ ಇದೆ ಎಂಬುದನ್ನು ನಾವು ಸರಿಯಾಗಿ ಅರಿತಿರುವುದಿಲ್ಲ. ಜೀವನ ನಡೆಸಲು ಯಾವ ಕೆಲಸವಾದರೇನು, ಯಾವ ಕೆಲಸ ಕೀಳು, ಯಾವ ಕೆಲಸ ಮೇಲು ಶ್ರೇಷ್ಠ ಕನಿಷ್ಠದ ಮನೋಭಾವನೆಗಳು ಕಾಯಕದಲ್ಲಿ ಎಲ್ಲಿದೆ? ಎಂಬ ಚಿಂತನೆಗಳು ಹೊರಬಂದವು. ಕಾರ್ಯ ನಿರ್ವಹಿಸಲು ಮನಸ್ಸು ಮತ್ತು ಶಕ್ತಿ ಇದ್ದರೆ ಸಾಕು. ಮಾಡುವ ಕೆಲಸದಲ್ಲಿ ಅಂತರವಿರುವುದಿಲ್ಲ. ಈ ರೀತಿಯ ಮನೋಭಾವನೆಗಳನ್ನು ಸಮಾಜ ಚಿಂತಕರು, ಲೇಖಕರು, ಕವಿಗಳು ಹೊರದಮ್ಮಿದರು.

ದಲಿತ, ಅಸ್ಪೃಶ್ಯರು ಎಂಬ ಪದಗಳ ದಲಿತರನ್ನು ಬಹುಕಾಲದಿಂದಲೂ ಆಳುತ್ತಾ ಬಂದಿದ್ದರೂ ಕೂಡ ಅವುಗಳನ್ನು ಮುರಿದು ಕಟ್ಟುವ ಕೆಲಸವನ್ನು ದಲಿತ ಕವಿಗಳು ಲೇಖಕರು ಮಾಡಿದ್ದು ಒಂದು ದೊಡ್ಡ ಸಾಧನೆಯಾಗಿ ರೂಪಾಂತರವಾಯಿತು. ಎಪ್ಪತ್ತರ ದಶಕದ ದಲಿತ ಸಾಹಿತ್ಯಸಂದರ್ಭದಲ್ಲಿ 'ದಲಿತ' ಎನ್ನುವುದಕ್ಕೆ ಪ್ರತಿಷ್ಠಿತ ಅರ್ಥಗಳು ಬಂದವು. ದಲಿತರೆಂದರೆ 'ದೇವರಮಕ್ಕಳು' ಅವರು ಬೇರ್‍ಯಾರು ಅಲ್ಲ. ಅವರು ಕಾಯಕ ಯೋಗಿಗಳು ಎಂಬ ಮನೋಭಾವನೆ ಜನರಲ್ಲಿ ಸುಳಿಯಿತು. ದಲಿತ ಚಳುವಳಿ ಈ ಶತಮಾನದ ಉತ್ತರಾರ್ಧದಲ್ಲಿ ಒಂದು ಸಾಮಾಜಿಕ, ರಾಜಕೀಯ ಶಕ್ತಿಯಾಗಿ ರೂಪುಗೊಂಡಿದರ ಪರಿಣಾಮವಾಗಿ ಒಂದು ಬಗೆಯ ಸ್ವಾಭಿಮಾನವು ದಲಿತರಲ್ಲಿ ಹುಟ್ಟಿದೆ. ಸ್ವಾಭಿಮಾನವು ಹುಟ್ಟಿಸಿದ್ದ ಆತ್ಮವಿಶ್ವಾಸ ಲೋಕ ಸಂಬಂಧವನ್ನು ಕುರಿತಂತೆ ಗಾಢವಾಗಿ ನೋಡಲು ಪ್ರೇರೇಪಿಸಿದೆ. ಅದರ ಮೊಳಕೆಗಳು ಇಲ್ಲಿನ ಆತ್ಮಕತೆಗಳಲ್ಲಿ ಅಲ್ಲಲ್ಲಿ ಎದ್ದು ತೋರುತ್ತವೆ.[೧]

ದಲಿತ ಜನಾಂಗದಲ್ಲಿ ಜಾತಿಯ ಹೆಸರಿನ ಬಗೆಗೆ ಸ್ವಾಭಿಮನಗಳು ಹೆಚ್ಚಾಗಿ, ಅವನ್ನೇ ಒಂದು ಮೇಲು ದರ್ಜೆಯ ನೆಲೆಗಳಲ್ಲಿ ನೋಡಲು ಪ್ರಾರಂಭಿಸಿದರು. ತಮ್ಮ ಜಾತಿ, ರೂಢಿಗತ ಕೆಲಸಕಾರ್ಯಗಳಲ್ಲಿ ಮೊದಲಿಗೆ ನೀರಸತೆ ಇದ್ದುದ್ದನ್ನು ಇಂದು ರಸಭರಿತವಾಗಿ ನೋಡಲು ಪ್ರಾರಂಭಿಸಿದರು. ಚಪ್ಪಲಿ ತಯಾರಿಸಿ, ಹರಿದಾಗ ಹೊಲೆಯುವ ಕೆಲಸ ಕೀಳಲ್ಲ. ಅದು ಜೀವನ ನಡೆಸುವ ಮಾರ್ಗೋಪಾಯ ಎಂದು

---

೧. ದಲಿತಮಾರ್ಗ, ಸಂಗ್ರಹ: ಡಾ. ಅರವಿಂದ ಮಾಲಗತ್ತಿ, ಪು. ೨೭೨.

ತಿಳಿದರು. ಮಾಂಸ ತಿನ್ನುವುದು ಅಸಹ್ಯವಾಗಿತ್ತು. ಆದರೆ ಅದು ಶಾರೀರಿಕ ಬೆಳವಣಿಗೆ ದೃಢಕಾಯ ಶರೀರಕ್ಕೆ ಅತ್ಯಂತ ಪ್ರಮುಖವಾದುದು ಎಂದು ತಿಳಿಸಿದರು.

ತುಂಬಾಡಿ ರಾಮಯ್ಯನವರ ತಂದೆ ಚಪ್ಪಲಿ ಹೊಲೆಯುವ ಉದ್ಯೋಗದಲ್ಲಿ ನಿರತರಾಗಿರುತ್ತಾರೆ. ಆದರೆ ಅದೊಂದು ಕೀಳಿರಿಮೆಯ ಕೆಲಸವಲ್ಲ ಜೀವನ ನಡೆಸಲು ಇರುವ ಸಾಧನ ಮಾರ್ಗ ಎಂದು ದೃಢವಾಗಿ ಹೇಳುತ್ತಾರೆ. 'ಇರೋಕ್ಕೊಂದು ಗುಡ್ಲು, ಉಡಾಕ್ಕೊಂದು ದುಪ್ಪಿ' ಗುಡಿಸಲು ಬಡವರು ವಾಸಿಸುವಂತಹದ್ದು, ಬಂಗಲೆಗಳು ಶ್ರೀಮಂತರ ಸಂಕೇತಗಳು ಆದರೆ ಗಾಳಿ, ಬೆಳಕು, ಸ್ವಚ್ಛಂದವಾಗಿ ಗುಡಿಸಲುಗಳಿಗೆ ಜೋಪಡಿಗಳಿಗೆ ಇರುತ್ತವೆ. ಅವುಗಳ ಮೌಲ್ಯ ಅಧಿಕವಾದುದು ಎಂದು ಪ್ರಧಾನವಾಗಿ ಗುಡಿಸಲನ್ನು ಹೇಳುತ್ತೇವೆ. ದೇವಸ್ಥಾನ ನಿಷೇಧ ಯಾವ ಕಾರಣಕ್ಕಾಗಿ ಎಂದು ಅದರ ವಿರುದ್ಧದ ಧ್ವನಿಯನ್ನು ಎತ್ತಿದ್ದಾರೆ. ಹಸುವಿನಲ್ಲಿ ಹಾಲನ್ನು ಹಿಂಡಕೂಡದು ಎಂಬ ಭಾವನೆಯನ್ನು ಮುರಿದದ್ದು ಕೂಡ ಪ್ರಧಾನತ್ವದ ನೆಲೆಯಲ್ಲಿ ಸೇರುತ್ತದೆ. ರೂಢಿಗತವಾಗಿ ಬಂದಿರುವ ಜಾತಿಯ ಕಂದಾಚಾರಗಳು, ಮೂಢನಂಬಿಕೆಗಳು, ಅಸ್ತವ್ಯಸ್ತ, ಆಚರಣೆಗಳು, ಇವುಗಳು ಅನಾದಿ ಸಮಯದಿಂದ ನಡೆದುಬಂದಿವೆ. ಕರಗದೆ ಹೊಲಸಾಗಿ ಬಿದ್ದಿರುವಂತಹ ಸಾಮಾಜಿಕ ಪಟ್ಟಭದ್ರಾ ಹಿತಾಸಕ್ತಿಗಳನ್ನು ಸರಿಪಡಿಸಿಕೊಂಡು ಜೀವನ ಸಾಗಿಸಬೇಕೆಂಬ ನಿರ್ಧಾರವನ್ನು ತೆಗೆದುಕೊಂಡದ್ದು ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಪ್ರಧಾನವಾಯಿತು. ಲೋಕ ಸಂಚಾರ ಮತ್ತು ಲೋಕ ಕಲ್ಯಾಣದ ಕನಸನ್ನು ಕಂಡು ದಲಿತೋಭಿವೃದ್ಧಿಯನ್ನು ಬಹುಮುಖ್ಯವಾಗಿ ಮೇಲೇರಿಸಬೇಕೆಂಬ ಚಿಂತನೆಗಳು ನಡೆಯತೊಡಗಿದವು. 'ದಲಿತನೆಂದರೆ, ಕೀಳು ಅಂತ್ಯಜ, ಅಸ್ಪೃಶ್ಯ ಇತ್ಯಾದಿ ಮನಸ್ಥಿತಿಗಳು ಒಂದು ಕಾಲಕ್ಕೆ ಬಲವಾಗಿ ಬೇರೂರಿದ್ದವು. ಆದರೆ ಸಂಪ್ರದಾಯಬದ್ಧವಾದ ಇವುಗಳನ್ನು ತೆರೆಮರೆಗೆ ಸರಿಸಬೇಕೆಂದು ದಲಿತ ಕವಿಗಳು, ಲೇಖಕರು ಮನಸ್ಸು ಮಾಡಿದರು.

ಜಾತಿಯನ್ನು ಕೀಳಾಗಿ ನೋಡುವ, ದಲಿತ ಜನರನ್ನು ಅಪಶಕುನವೆಂದು, ಕಪ್ಪಗೆ ಇರುವರೆಂದು ನಾನಾ ಹೀನಾರ್ಥಗಳನ್ನು ಕಲ್ಪಿಸಲಾಗಿತ್ತು. ಸವರ್ಣೀಯರ ಬೀದಿಗಳಲ್ಲಿ ನಡೆಯಕೂಡದು, ಉಗುಳಕೂಡದು, ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡು ನಡೆಯಬಾರದು. ಈ ರೀತಿಯ ಅಂಧಾಭಿಮಾನಗಳನ್ನು ಮೆಟ್ಟಿ ನವ ಸಮಾಜದ ನಿರ್ಮಾಣಕ್ಕೆ ತಮ್ಮ ಸಾಹಿತ್ಯ ಕೃತಿಗಳ ಮೂಲಕ ಪ್ರೇರೇಪಣೆ ನೀಡಿದರು. ಜಾತಿ,

ಜನಾಂಗಗಳಲ್ಲಿ ಅಂತರವನ್ನು ನೀಗಿಸಬೇಕು. ಅವುಗಳಿಗೊಂದು ಒಳ್ಳೆಯ ಅರ್ಥ ಸ್ವರೂಪವನ್ನು ನೀಡತೊಡಗಿದರು. ದೇವರ ಹೆಸರಿನ ನಾಮಕರಣಗಳು ವ್ಯಕ್ತಿ ವಿರುದ್ಧವಾದವುಗಳು, ಹೆಸರೇ ಬೇರೆ, ವ್ಯಕ್ತಿಯೇ ಬೇರೆ. ಯಾರು ಯಾವ ಹೆಸರನ್ನಾದರೂ ಅಂಗೀಕರಿಸಿಕೊಳ್ಳಬಹುದು ಎಂಬ ತಿಳುವಳಿಕೆ ಹೊರಬಂದಿತು ಅಂದರೆ ಜಾತಿಯ ಹೆಸರನ್ನು ಬಾಯಬಿಟ್ಟು ಕೇಳುವುದು, ಜಾತಿಯ ಹೆಸರನ್ನು ಕೇಳಿ ತಮ್ಮ ಕಿವಿಗಳು ಅಪಶಕುನವಾಗುತ್ತವೆಂದು ಹೆಸರು ಕೇಳಿದ ಕೂಡಲೇ ಆತ ಯಾವ ಜಾತಿಯವನು ಎಂದು ಗೊತ್ತಾಗಲೆಂದು ಸ್ವಚ್ಚಂದದ ಹೆಸರುಗಳನ್ನು ಸ್ವೀಕರಿಸಲು ಹೇಳುತ್ತಿದ್ದರು. ಆದರೆ ಈ ಎಲ್ಲಾ ನಿರ್ಬಂಧಗಳನ್ನು ದೂರತಳ್ಳಿ, ತಾವು ಬಯಸಿದ ಹೆಸರುಗಳನ್ನು ನಾಮಕರಣ ಮಾಡಿಕೊಳ್ಳಬಹುದು ಎಂದು ಸಂಪ್ರದಾಯವನ್ನು ಮುರಿದದ್ದು ಇಪ್ಪತ್ತನೇ ಶತಮಾನದಲ್ಲಿ ದಲಿತ ಕವಿಗಳಿಗೆ ಪ್ರಧಾನವಾಯಿತು.

ತಮ್ಮ ಹೆಸರಿನ ಮುಂದೆ ಜಾತಿಯ ಹೆಸರನ್ನು ಸೇರಿಸಿಕೊಂಡು ಅದೇ ಪ್ರಮುಖ. ಪ್ರಬುದ್ಧ ಎಂದು ತಿಳಿಸಿದರು. ಜಾತಿಯ ಹೆಸರನ್ನು ಅಸ್ಪೃಶ್ಯರು ಹೇಳಲು ಅಂಜುಬುರುಕರಂತೆ ಹಿಂದುಳಿಯುತ್ತಿದ್ದ ಕಾಲವಿತ್ತು. ಆದರೆ ಅದನ್ನೇ ಮುಖ್ಯವೆಂದು ಇಂದಿನ ದಲಿತ ಪೀಳಿಗೆಯವರು ಅನುಸರಿಸುತ್ತಿದ್ದಾರೆ. ಯಾವ ಕಾಲದಲ್ಲಿ ಹೀನಾರ್ಥವನ್ನು ಜಾತಿಯು ಪಡೆದಿತ್ತೋ ಅದು ಇಂದು ಸ್ವಲ್ಪ ಕಣ್ಮರೆಯಾಗುತ್ತಿದೆ. ಬಡತನ, ಜಾತಿ ಅವಮಾನದ ಭೀತಿಗಳು ಇರದ ದಲಿತ ಕಥೆ ಸುಳ್ಳು ಆದರೆ ಅದನ್ನು ಪ್ರತಿಭೆಯಲ್ಲಿ ಲೇಖಕ ಗೆದ್ದು ಪ್ರಧಾನ ಮಾಡುತ್ತಾನೆ. ಹಿಂಸೆ ದಿಗ್ಭ್ರಮೆ ರೊಚ್ಚು ರೋಷಗಳ ಭಾವಗಳು ಪ್ರಧಾನವಾಗಿರುವ ರೀತಿಯಲ್ಲಿ ಈಗ ದಲಿತ ವ್ಯಕ್ತಿತ್ವವನ್ನು ಸೈದ್ಧಾಂತಿಕವಾಗಿ ಸೃಷ್ಟಿಸಲಾಗಿದೆ. ದಲಿತ ಲೇಖಕರು ಕೆಲವು ಸಿದ್ಧಾಂತಗಳನ್ನು ಪ್ರಧಾನವಾಗಿ ಇರಿಸಿಕೊಂಡು ಸಾಹಿತ್ಯ ರಚನೆಯಲ್ಲಿ ತೊಡಗಿ ಸಾಹಿತ್ಯದ ವಿವಿಧ ಅಂಗಗಳಲ್ಲಿ ತೊಡಗಿ ತಮ್ಮ ಒಡಲಾಳದ ನೋವನ್ನು ಹೊರ ತೆಗೆದರು. ಮಾರ್ಕ್ಸ್, ಏಂಜಲ್ಸ್, ಅಂಬೇಡ್ಕರ್ ಮುಂತಾದವರ ಸಮಾಜವಾದವನ್ನು ಸಮತಾವಾದವನ್ನು ಪ್ರಧಾನವಾಗಿರಿಸಿಕೊಂಡು ಸಾಹಿತ್ಯ ಕೃಷಿಯಲ್ಲಿ ದಲಿತ ಲೇಖಕರು ತೊಡಗಿದರು.

ಒಂದು ಕಾಲಕ್ಕೆ ಅಸ್ಪೃಶ್ಯರು ಯಜ್ಞ-ಯಾಗಾದಿಗಳಿಂದ ಬಹುದೂರವಿರಬೇಕಿತ್ತು. ಅದರ ಸನೀಹಕ್ಕೆ ಹೋಗಕೂಡದು, ಸಂಸ್ಕೃತವನ್ನು ಕೇಳಿದರೆ ಕಾಯ್ದ ಸೀಸವನ್ನು ಕಿವಿಯಲ್ಲಿ ಸುರಿಯಬೇಕು ಎಂಬೆಲ್ಲಾ ಕಟ್ಟಪ್ಪಣೆಗಳಿದ್ದವು. ಆದರೆ ಅದನ್ನು ಮೀರಿ

ದಲಿತ ವಿದ್ಯಾರ್ಥಿಗಳು ಪ್ರತಿವರ್ಷ ಗಾಂಧಿ ವಿದ್ಯಾರ್ಥಿ ನಿಲಯದಲ್ಲಿ ಪ್ರತಿವರ್ಷ ಉಪಾಕರ್ಮದ ದಿನ ಯಜ್ಞ ಮಾಡುತ್ತಿದ್ದರು. ಸಂಸ್ಕೃತ ಶ್ಲೋಕ ಪಠಿಸುತ್ತಿದ್ದರು. ಎರಡೂ ಹಾಸ್ಟೇಲಿನ ವಿದ್ಯಾರ್ಥಿಗಳಿಗೆ ಜನಿವಾರ ಧಾರಣೆ ಮಾಡಿಸುತ್ತಿದ್ದರು. ಪ್ರಧಾನತ್ವದ ಅನುಕರಣೆಯ ಸಂಸ್ಕೃತಿಯನ್ನು ದಲಿತ ವಿದ್ಯಾರ್ಥಿಗಳು ರೂಢಿಸಿಕೊಂಡಿದ್ದನು ಸಿದ್ಧಲಿಂಗಯ್ಯನವರು ಬಹು ಮುಖ್ಯವಾಗಿ ತಮ್ಮ ಆತ್ಮಕತೆಯಲ್ಲಿ ಗುರ್ತಿಸುತ್ತಾರೆ. ಬೆಂಗಳೂರಿನ ಎ.ಪಿ.ಎಸ್.ಕಾಲೇಜಿನಲ್ಲಿ ನಡೆಯುತ್ತಿದ್ದ 'ದೇವರಿಲ್ಲ' ಎಂಬ ಚರ್ಚಾಸ್ಪರ್ಧೆಯ ಕಾರ್ಯಕ್ರಮದಲ್ಲಿ ವಿಷಯದ ಪರವಾಗಿದ್ದ ಸಿದ್ದಲಿಂಗಯ್ಯನವರು ಜ್ಯೋತಿಬೆಳಗಿಸಿ ಉದ್ಘಾಟಿಸಿದ್ದ ಜ್ಯೋತಿಯನ್ನು ಬಾಯಿಯಲ್ಲಿ ಉರುಬಿ ಆರಿಸಿದರು. ಯಾವುದು ಸಂಸ್ಕೃತಿಯ ನೆಲೆಯಲ್ಲಿ ಪ್ರಧಾನವಾಗಿತ್ತು. ಅದನ್ನು ಮಿತಿಮೀರಿದ ರೀತಿಯಲ್ಲಿ ನಡೆಸಿಕೊಳ್ಳಲು ನಮ್ಮ ದಲಿತ ಕವಿಗಳು ಮುಂದಾಗಿದ್ದಾರೆ. ಯಾವುದರ ವಿರುದ್ಧ ಧ್ವನಿ ಎತ್ತಬಾರದು ಎಂದು ರೂಢಿಗತ ಕಟ್ಟಪ್ಪಣೆಗಳಿದ್ದವೋ ಅವುಗಳೆಲ್ಲವನ್ನು ಮುರಿದು ಕಟ್ಟಲು ಎಚ್ಚರ ಸಂದರ್ಭದ ಕವಿಗಳು ಪ್ರಯತ್ನಿಸಿದರು. ಏನೆಲ್ಲಾ ಅಂಕುಡೊಂಕುಗಳಿದ್ದವೋ ಅವುಗಳನ್ನು ಸರಿಪಡಿಸುವ ಕೆಲಸವನ್ನು ದಲಿತ ಲೇಖಕರು ಮಾಡಲು ಹೊರಟು ಇತರರನ್ನು ಎಚ್ಚರಿಸಿದ್ದು ಕೂಡ ದಲಿತ ಚಿಂತನೆಯಲ್ಲಿ ಪ್ರಮುಖವಾಯಿತು. ದಿನಪತ್ರಿಕೆಗಳು ಕೂಡ 'ಶೂದ್ರ' ಹೆಸರಿನಲ್ಲಿ ಹೆಚ್ಚಾಗತೊಡಗಿದವು. ಕರಿಯನೆಂದೂ ಪ್ರಾಮಾಣಿಕನಾಗಲಾರ, ಆತ ದುಷ್ಟ, ಅನಾಕರಿಕ, ಕುರೂಪಿ ಬುದ್ಧಿಹೀನ_ ಇತ್ಯಾದಿ ಸಾಮಾಜಿಕ ವಸ್ತುಸ್ಥಿತಿಗಳು ಅತ್ಯಂತ ಜಾಣತನದಿಂದ ರೂಪಿಸಿದ ಶೋಷಣಾ ಜಾಲವಷ್ಟೇ ಆಗಿದ್ದು ಆ ಹಿಂದೆ ವರ್ಗ ಹಿತಾಸಕ್ತಿಗಳು ಕೆಲಸ ಮಾಡಿವೆ.

ಅಮೇರಿಕದ ಕಪ್ಪುಕಾವ್ಯ, ಮಹಾರಾಷ್ಟ್ರದ ಬ್ಲಾಕ್ ಪ್ಯಾಂಥರ್ಸ್ ವರ್ಗಸಾಹಿತ್ಯದಲ್ಲಿ ವರ್ಣ ವ್ಯವಸ್ಥೆಯ ವಿರುದ್ಧದ ಧ್ವನಿಗಳು ಮೊಳಗತೊಡಗಿದವು. ಕಪ್ಪಾದುದೆಲ್ಲವನ್ನು ಮೆಚ್ಚುವ, ಪ್ರಶಂಸಿಸುವ ಬಿಳಿಯದನ್ನು ತಿರಸ್ಕರಿಸುವ ಪ್ರವೃತ್ತಿ ಬ್ಲಾಕ್ ಪ್ಯಾಂಥರ್ಸ್ ಮತ್ತು ಕಪ್ಪು ಕಾವ್ಯಗಳಲ್ಲಿ ಕಾಣಿಸಿಕೊಂಡಿತು. ಕರಿಯರು ತಮ್ಮ ಬಣ್ಣದ ಬಗ್ಗೆ ಕೀಳರಿಮೆಯನ್ನು ಅಂತಿಮವಾಗಿ ಸೀಳಿ ಹಾಕಲು 'ನೀಗ್ರೋಟ್ಯೂಡ್' ಪ್ರಜ್ಞೆಯ 'Baclk is Beautiful' ಎಂಬ ಘೋಷಣೆಯಿಂದ ಸ್ವಾಭಿಮಾನ ಗಳಿಸಿದರು. ಕರಿಯರು ತಮ್ಮ ನೀಗ್ರೋಟ್ಯೂಡ್'ನ್ನು ಮೀರುವ ತಮ್ಮ ಆತ್ಮ ಪ್ರತ್ಯಯದಲ್ಲಿ 'Black' ಎಂದು ಕರೆದುಕೊಂಡಂತೆ, ಅವರ ಕಲೆಸಾಹಿತ್ಯ ಕುರಿತಂತೆ ಕಪ್ಪು ಸೌಂದರ್ಯ ಮೀಮಾಂಸೆಯೇ ಪ್ರತ್ಯೇಕವಾಗಿದೆ." ಈ ಮೇಲಿನಲ್ಲೂ ಆಫ್ರಿಕನ್, ಅಮೇರಿಕನ್,

ಮಹಾರಾಷ್ಟ್ರದ ದಲಿತ ಸಾಹಿತ್ಯದ ಅಂಶಗಳಿಂದ ಪ್ರೇರೇಪಣೆಗೊಂಡಂತಹ ಕನ್ನಡದ ದಲಿತ ಲೇಖಕರು ತಮ್ಮ ಸಾಹಿತ್ಯ ಕೃತಿಗಳಲ್ಲಿ ತಂದರು. ಪ್ರಧಾನವಾಗಿ ವರ್ಣ, ಜಾತಿಗಳನ್ನೇ ಬಾಯ್ತೆರೆದು ಜೋರಾಗಿ ಹೇಳತೊಡಗಿದರು. ಸಂಕೀರ್ಣತೆ ಗೊಂಡಿದ್ದ ಜಟಿಲ ಸಮಾಜವಿರೋಧಿ ಸಮಸ್ಯೆಗಳನ್ನು ಸರಳೀಕರಣಗೊಳಿಸುವ ಕಡೆಗೆ ತಮ್ಮ ಲೇಖನಗಳನ್ನು ತಿರುಗಿಸಿದರು. ಹೊಲಗೇರಿಯ ಬದುಕು, ಭಾಷೆ, ಬಣ್ಣ, ಬವಣೆಗಳು ಸಾಹಿತ್ಯದಲ್ಲಿ ತೆರೆದುಕೊಳ್ಳತೊಡಗಿದೊಡನೆ ಸಾಹಿತ್ಯದಲ್ಲಿ ಮಾದರಿಗಳು ಕಳಚಿಕೊಳ್ಳತೊಡಗಿದವು. ಒಂದು ಚಳುವಳಿಯ ಪ್ರಪಂಚದಾದ್ಯಂತ ಅಲ್ಲದೆ ಹೋದರೂ ಸಮಾನ ದುಃಖಗಳನ್ನು ನೋವುಂಡವರನ್ನು ಒಂದು ಮಾಡುವುದನ್ನು ನಾವಿಲ್ಲಿ ಕಾಣಬಹುದು.

ದಲಿತ ಮತ್ತು ದಲಿತ ಪರ ಕಾಳಜಿ ಮತ್ತು ಚಿಂತನೆಗಳು ಭಾರತೀಯ ಸಮಾಜದ ಮುಖ್ಯ ಕೇಂದ್ರಗಳಾಗಿ ರೂಪುಗೊಂಡಿದ್ದು ಕೂಡ ದಲಿತ ಜನಾಂಗ ಮತ್ತು ಸಾಹಿತ್ಯ ಸಂಸ್ಕೃತಿಗೆ ಒಂದು ಪ್ರಧಾನ ನೆಲೆಯಾಯಿತು. ಸ್ವತಂತ್ರಪೂರ್ವ ಭಾರತದಲ್ಲಿ ಕಣ್ಣು ಮುಚ್ಚಿಕೊಂಡು ರೆಪ್ಪೆ ಒಳಗಿದ್ದ ದಲಿತ ಸಂವೇದನಾ ಶೀಲತೆಗಳು ಎಪ್ಪತ್ತರ ನಂತರ ಭಾರತದಲ್ಲಿ ಕಣ್ತೆರೆದು ದಿಟ್ಟಿಸತೊಡಗಿದವು. ಸಜೀವ ಜಡವಸ್ತು ವಿಷಯಗಳಾಗಿದ್ದಂತಹ ದಲಿತ ಚಿಂತನೆಗಳು ಭಾರತೀಯ ಸಮಾಜದಲ್ಲಿ ಬೀದಿ-ಬೀದಿಯಲ್ಲಿ ದೃಢವಾಗಿ ನಿಂತು ಮಾತನಾಡತೊಡಗಿದವು. ಘೋರಂಧಕಾರದಲ್ಲಿ ತಡವರಿಸುತ್ತಿದ್ದ ದಲಿತ ಸಾಮಾಜಿಕ ವ್ಯವಸ್ಥೆಯ ಕ್ರಿಯಾತ್ಮಕ ಬದುಕು ಚಲನಶೀಲತೆಯನ್ನು ಪಡೆದು ಅದಕ್ಕೊಂದು ಪ್ರೌಢತೆ ಧಕ್ಕಿದ್ದು ದಲಿತ ಸಂಸ್ಕೃತಿ ಮತ್ತು ಸಾಹಿತ್ಯದಲ್ಲಿ ಪ್ರಧಾನವಾಯಿತು. ಉಸಿರುಗಟ್ಟಿದ್ದ ದಲಿತ ಜನಾಂಗೀಯ ಬದುಕಿಗೊಂದು ನೆಲೆ ಕನ್ನಡ ಸಾಹಿತ್ಯದಲ್ಲಿ ಪಾಶ್ಚಿಮಾತ್ಯ ಚಿಂತಕರಿಂದ ದೊರೆತಿದ್ದು ಭಾರತೀಯ ದಲಿತ ವಿಭಾಗಕ್ಕೊಂದು ಚರಿತ್ರೆಯಾಯಿತು.

ಸಿದ್ಧಲಿಂಗಯ್ಯನವರು ಜಾತಿ ವಿರುದ್ಧದ ಹೋರಾಟಗಳು ಮೆರವಣಿಗೆಯ ರೂಪದಲ್ಲಿ ಬೆಳೆದು ಬಂದವು. "ಎಲ್ಲಾ ಜಾತಿಯ ಬಡವರು ದಲಿತರು" ಎನ್ನುವಂತಹ ಅಭಿಪ್ರಾಯ ಅವರಿಗಿತ್ತು. ಜನ ಸಾಗರವನ್ನು ಕಟ್ಟಿ ನೊಂದಿದ್ದ ಜನರಿಗೊಂದು ಆತ್ಮಸ್ಥೈರ್ಯವನ್ನು ಸಭೆ ಸಮಾರಂಭಗಳಂತಹ ಕಾರ್ಯಕ್ರಮಗಳಲ್ಲಿ ತಿಳಿಯಪಡಿಸಿದರು. "ಹುಟ್ಟಿದ ಒಂದು ವರ್ಷಕ್ಕೆ ಹೋರಾಟದ ಮಾರ್ಗಕ್ಕೆ ಬಂದ ಈ ಮಗು ಪುಣ್ಯಶಾಲಿ

ಎನಿಸಿತು" ಅಂದರೆ ಸಿದ್ಧಲಿಂಗಯ್ಯನವರ ಸಭೆ-ಸಮಾರಂಭಗಳಲ್ಲಿ ಸ್ತ್ರೀಯರು-ಮಕ್ಕಳು ಎಲ್ಲರೂ ಪಾಲ್ಗೊಳ್ಳುತ್ತಿದ್ದರು. ಕಾರ್ಮಿಕ ವ್ಯವಸ್ಥೆಯ ಸುಧಾರಣೆಯನ್ನು ಇವರು ಬಯಸಿದ್ದರು. ಎಂತಹ ಶ್ರೀಮಂತನಾದರೂ ಕೂಡ ಸಾಮಾನ್ಯವ್ಯಕ್ತಿಯ ನೆಲೆಯನ್ನು ಗಮನಿಸಬೇಕೆಂದು ಹೇಳುತ್ತಿದ್ದರು. ಸಾಲ ಕೊಡಬೇಕಾಗಿದ್ದಕ್ಕೆ ಅದರ ಬಡ್ಡಿ ಹಣಕ್ಕಾಗಿ ನಾಲ್ಕು ವರ್ಷದ ಮಗುವೊಂದನ್ನು ಹಣ ನೀಡಿದ್ದವನು ಎತ್ತಿ ಕೊಂಡೊಯ್ಯುತ್ತಾನೆ. ಆದರೆ ಇಲ್ಲಿ ತಣ್ಣನೆಯ ಆಕ್ರೋಶವೊಂದನ್ನು ಪ್ರತಿನಿದಿಸುತ್ತಾ ಕೈಲಾಗದವರ ಅಸಹಾಯಕತೆಗೆ ನೆರವಾಗಬೇಕೆಂದು ಬಯಸುವಂತಿದೆ ಈ ಹೇಳಿಕೆ. ಸಾಲದ ಹಣವಸೂಲಿಗಾಗಿ ಉಳ್ಳವರು ಇಲ್ಲದವರನ್ನು ಅದೆಷ್ಟು ಕ್ರೂರವಾಗಿ ಬಳಸಿಕೊಳ್ಳುತ್ತಾರೆ ಅದರ ವಿರುದ್ಧದ ಧ್ವನಿಗಳು ಸತ್ತಿವೆ, ಉಸಿರಿಲ್ಲದ ಈ ಧ್ವನಿಗಳಿಗೆ ಜೀವಕಳೆಯನ್ನು ತುಂಬುವುದು ಯಾರು? ಯಾವಾಗ? ಎಂದು ನಿರೀಕ್ಷಿಸುವಂತಿದೆ.

# ಉಪಸಂಹಾರ

ಸಾಹಿತ್ಯ ಚಳುವಳಿಗಳು ಮತ್ತು ಕಾಲಮಾನದ ಬದಲಾವಣೆಗಳು ಕನ್ನಡ ಆತ್ಮಕತೆಗಳ ದಿಕ್ಕನ್ನು ಅದರಲ್ಲೂ ದಲಿತ ಆತ್ಮಕತೆಗಳು ನಿಸ್ಸಂಶಯವಾಗಿ ಪರಿವರ್ತಿಸಿವೆ. ಅದರಲ್ಲೂ ನವೋದಯ ಸಂದರ್ಭದ ಆತ್ಮಕತೆಗಳು ಪಡೆದ ಪಡೆಯುತ್ತಿದ್ದ ಸ್ಥಾನಮಾನಗಳು ಪ್ರಗತಿಶೀಲ ಸಂದರ್ಭದಲ್ಲಿ ಸ್ವಲ್ಪ ವ್ಯತ್ಯಾಸಗೊಂಡಿತು.

ದಲಿತ ಸಾಹಿತ್ಯ ಸಂದರ್ಭದಲ್ಲಿ ಆತ್ಮಕತೆಯ ಪರಿಕಲ್ಪನೆಯ ನೆಲೆಬೆಲೆಗಳನ್ನು ನಿರ್ಧರಿಸುವ ಸಂದರ್ಭದಲ್ಲಿ ಪ್ರಮುಖ ಮಾನದಂಡವಾದದ್ದು, ದಲಿತರು ಗ್ರಹಿಸಿದ ಮತ್ತು ಸೃಜಿಸಿದ ರೀತಿಯ ನವೋದಯ ಪ್ರಗತಿಶೀಲ ಮತ್ತು ನವ್ಯ ಬರಹಗಾರರಿಗಿಂತ ಭಿನ್ನವಾಯಿತು. ದಲಿತರಿಗೆ ಕಾಲದ ಪರಿಸರ ಕೂಡ ಇವರ ಜರೂರು ತನಕ್ಕೆ ಸಹಾಯ ಮಾಡಿತು.

ಸಿದ್ದಲಿಂಗಯ್ಯ ಅವರ ಬಹುತೇಕ ಬರಹಗಳು ತುರ್ತಿನ ರೀತಿಯನ್ನು ಆಧರಿಸಿಯೇ ಬಂದಂತವೆಂಬುದನ್ನು ಗಮನಿಸಿದಾಗ ಈ ವಿಚಾರ ಹೆಚ್ಚು ಸ್ಪಷ್ಟವಾಗುತ್ತದೆ.

ಕನ್ನಡ ದಲಿತ ಆತ್ಮಕತೆಗಳ ಹುಟ್ಟಿಗೆ ಮರಾಠಿ ದಲಿತ ಆತ್ಮಕತೆಗಳು ಹೆಚ್ಚು ಪ್ರೇರಣೆ ಮತ್ತು ಪ್ರಭಾವವನ್ನು ನೀಡಿವೆ. ಅಂದರೆ ಮರಾಠಿಯಲ್ಲಿ ಬಂದಂತಹ ಆತ್ಮಕತೆಗಳು ಕನ್ನಡಕ್ಕೆ ಅನುವಾದಗೊಂಡ ಮೇಲೆ ಅವುಗಳನ್ನು ಕನ್ನಡ ಲೇಖಕರು ಓದಿದ ನಂತರದಲ್ಲಿ ತಾವು ಬರೆಯಬೇಕೆಂಬ ಹಂಬಲ ಹೊತ್ತು ಬರೆಯತೊಡಗಿದರು. ಆದರೆ ಮರಾಠಿಯಲ್ಲಿ ಆದ ಬಿರುಸಿನ ಬರವಣಿಗೆ ಕನ್ನಡ ದಲಿತ ಸಂದರ್ಭದಲ್ಲಿ ಬರಲಿಲ್ಲ.

ದಲಿತ ಸಾಹಿತ್ಯ ಸಂದರ್ಭದಲ್ಲಿ ಕನ್ನಡದ ಮೊದಲ ಆತ್ಮಕತೆ ಡಾ. ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಇದು ಎಂಬತ್ತರ ದಶಕದಲ್ಲಿ ಕನ್ನಡ ದಲಿತ ಸಾಹಿತ್ಯ ಸಂದರ್ಭದ ಮೊದಲ ಆತ್ಮಕತೆ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಪ್ರಾರಂಭದ ಘಟ್ಟದಲ್ಲಿ ಹಲವಾರು ಟೀಕೆಗಳಿಗೆ ಈ ದಲಿತ ಆತ್ಮಕತೆ ಒಳಗಾಯಿತು. ಹೇಗೆಂದರೆ ಮುಪ್ಪಿನ ಸಂದರ್ಭದಲ್ಲಿ ಮನಸ್ಸು ಮಾಗಿದ ಸಂದರ್ಭದಲ್ಲಿ ಆತ್ಮಕತೆ ಬರೆಯುವ ಜಾಯಮಾನಕ್ಕೆ ಕನ್ನಡ ಲೇಖಕರು ಒಳಗಾಗಿರುವುದನ್ನು ನಾವು ನವೋದಯದಿಂದ ಹಿಡಿದು ನವ್ಯ ಸಾಹಿತ್ಯದವರೆಗಿನ ಕಾಲಘಟ್ಟದಲ್ಲಿ ಕಾಣಬಹುದು.

ಕನ್ನಡ ದಲಿತ ಸಾಹಿತ್ಯ ಸಂದರ್ಭದಲ್ಲಿ ಮಾಲಗತ್ತಿಯವರ ಆತ್ಮಕತೆ ಇಡೀ ಹರವನ್ನು ದೊಡ್ಡದಾಗಿಸಿ ನಿಂತು. ಹಲವು ರೀತಿಯ ವಿಮರ್ಶೆಗೆ ಒಳಗಾಯಿತು. ಹಾಗೆಯೇ ಸಿದ್ಧಲಿಂಗಯ್ಯನವರು "ಊರುಕೇರಿ" ಆತ್ಮಕತೆಯನ್ನು ಬರೆದರು. ಅರವಿಂದ ಮಾಲಗತ್ತಿಯವರಿಗಿಂತ ಭಿನ್ನವಾದ ನೆಲೆಯಲ್ಲಿ ಈ ಕೃತಿ ಹೊರಬಂದಿತು. ಮತ್ತೇ ತುಂಬಾಡಿ ರಾಮಯ್ಯ ಅವರ 'ಮಣೆಗಾರ" ಇದು ಸಹ ಒಂದು ವಿಶಿಷ್ಟತೆಯನ್ನು ಸಾಧಿಸಿಕೊಂಡು ಕನ್ನಡ ಸಾಹಿತ್ಯವನ್ನು ಪ್ರವೇಶಿಸಿತು. ಮತ್ತೊಂದು ಆತ್ಮಕತೆ ಕೆ. ಗೋವಿಂದರಾಜು ಅವರ "ಮನವಿಲ್ಲದವರ ಮಧ್ಯೆ" ಪ್ರಕಟವಾಯಿತು. ಆದರೆ ಮರಾಠಿ ಸಾಹಿತ್ಯದಲ್ಲಿ ಸಾಧಿಸಿದ ವೇಗದ ಗತಿಯ ಕನ್ನಡ ದಲಿತ ಸಾಹಿತ್ಯ ಸಂದರ್ಭದಲ್ಲಿ ಬರಲಿಲ್ಲ.

ನನ್ನ ಅಧ್ಯಯನ ಕಕ್ಷೆಯಲ್ಲಿರುವ ಎರಡು ಆತ್ಮಕತೆಗಳನ್ನು ಕುರಿತು ಹೇಳುವುದಾದರೆ ಇವು ಬಂದಾಗ ಅಂದಿನ ಓದುಗರ ಮತ್ತು ವಿಮರ್ಶಕರ ಮೆಚ್ಚುಗೆಗೆ ಪಾತ್ರವಾದವು. ಇದರಲ್ಲಿ ಮೊದಲ ಅಧ್ಯಾಯದಲ್ಲಿ ಕೂಡ ಆತ್ಮಕತೆಗಳಲ್ಲಿ ದಲಿತ ಆತ್ಮಕತೆಗಳನ್ನು ಸ್ಥೂಲವಾಗಿ ವಿವರಿಸಲಾಗಿದೆ. ದಲಿತ ಸಾಹಿತ್ಯ ಸಂದರ್ಭದಲ್ಲಿ ಬಂದಂತಹ ಆತ್ಮಕತೆಗಳು ಭಿನ್ನತೆಯಲ್ಲಿ ವಿಶಿಷ್ಟತೆಯನ್ನು ಕಂಡುಕೊಂಡಿರುವುದನ್ನು ಗುರ್ತಿಸಬಹುದು. ದಲಿತ ಸಾಹಿತ್ಯ ಸಂದರ್ಭದಲ್ಲಿ ನಡೆದ ಒಗ್ಗಟ್ಟಿನ ವೇದಿಕೆ ನಿರ್ಮಾಣವಾಗಲಿ ಅವರ ಒಡಕು ಜಗಳವಾಗಲಿ ಅವರ ಆತ್ಮಕತೆಗಳ ವಸ್ತು ರೀತಿಗಳ ಮೇಲೆ ಬೀರಿದ ಪರಿಣಾಮವನ್ನು ನೋಡಿದರೆ ಆಗಬೇಕಾದಷ್ಟು ಪರಿವರ್ತನೆ ಆಗಲಿಲ್ಲವೆಂದೇ ಹೇಳಬೇಕಾಗಿದೆ. ಆದರೆ ದಲಿತ ಸಾಹಿತ್ಯ ಸಂದರ್ಭದಲ್ಲಿ ಆತ್ಮಕತೆಗಳು ಪ್ರಮುಖ ಮಾಧ್ಯಮವಾಗಿಯೇನು ಇರಲಿಲ್ಲ. ಆದರೆ ದಲಿತ ಸಾಹಿತ್ಯ ಸಂದರ್ಭದಲ್ಲಿ ಕಾವ್ಯ ಕತೆ, ನಾಟಕ ಮುಂತಾದವುಗಳು ಬೀರಿದ ಪರಿಣಾಮವನ್ನು ದಲಿತರಲ್ಲಿ ವಿಶಿಷ್ಟತೆಯ ಛಾಪನ್ನು ಮೂಡಿಸುವಲ್ಲಿ ದಲಿತ ಆತ್ಮಕತೆಗಳು ಯಶಸ್ವಿಯಾಗಿವೆ.

ಇಂದಿನ ಕಾಲದ ದೃಷ್ಠಿ ಧೋರಣೆಗಳಿಗೆ ಒಗ್ಗುವಂತೆ ಅಂದಿನ ಸಮಾಜದ ಸ್ಥಿತಿಯನ್ನು ಅನಾವರಣ ಮಾಡುವುದು ಅನಿವಾರ್ಯವಾಗಿ ದಲಿತ ಆತ್ಮಕತೆಗಳ ಸ್ವರೂಪ ಬದಲಾಯಿತು. ಇಡೀ ಸಮೂಹ ಪ್ರಜ್ಞೆ ಮೂಡಿಸಲು ಈ ಪ್ರಕಾರ ಸರಿಯೆಂದು ತೋರಿದ ಕಾರಣ ಇಂದಿನ ದಲಿತ ಸಮುದಾಯದ ಆತ್ಮಕತೆಗಳನ್ನು ಒಪ್ಪಿ ಬರೆಯುವ ನಿಟ್ಟಿನಲ್ಲಿ ಸಾಗುತ್ತಿದೆ.

ದಲಿತ ಸಾಹಿತ್ಯ ಸಂದರ್ಭದಲ್ಲಿ ಕಾವ್ಯ, ಕತೆಗಳು ಮಾಡಿದಷ್ಟು ಕ್ರಾಂತಿಯನ್ನು ಇಂದಿನ ದಲಿತ ಆತ್ಮಕತೆಗಳು ಸೌಮ್ಯವಾದ ರೀತಿಯಲ್ಲಿ ಹೇಳಲು ಹೊರಟಿವೆ. ಆದರೆ ಇವುಗಳಲ್ಲಿ ಬಾಲ್ಯದ ಅನುಭವಗಳಿಗೆ ಹೆಚ್ಚು ಒತ್ತನ್ನು ಕೊಟ್ಟಿರುತ್ತವೆ. ಆದ್ದರಿಂದ ರೊಚ್ಚು, ಆವೇಶಗಳು ಬರುವುದಿಲ್ಲ. ಇವು ತಮ್ಮ ವಿಶಾಲ ಹೃದಯದ ವ್ಯಕ್ತಿತ್ವವನ್ನು ಅನಾವರಣ ಮಾಡಿವೆ.

ಸಿದ್ದಲಿಂಗಯ್ಯನವರ 'ಊರುಕೇರಿ' ಮತ್ತು ತುಂಬಾಡಿ ರಾಮಯ್ಯ ಅವರ 'ಮಣೆಗಾರ' ತಮ್ಮ ಸುತ್ತಲಿನ ಪರಿಸರದೊಂದಿಗೆ ಅಂದಿನ ಸಮಾಜದ ಅಮಾನವೀಯ ಅಂಶಗಳನ್ನು ತೆರೆದಿಡುತ್ತವೆ.

ದಲಿತ ಸಾಹಿತ್ಯದ ಆತ್ಮಕತೆಗಳು ಮಾನವತಾವಾದ ಸಮಾನತೆ, ಜನಪರ ಕಾಳಜಿಗಳನ್ನು ಎತ್ತಿ ಹಿಡಿಯುತ್ತವೆಂಬುದು ನಿಜ. ಆದರೆ ಆತ್ಮಕತೆಗಳು ಮಾತ್ರ ಅದು ಗಟ್ಟಿಯಾದ ಅನುಭವ ಮತ್ತು ಸಮೂಹ ಪ್ರಜ್ಞೆಯನ್ನು ಮೂಡಿಸುತ್ತದೆ.

ದಲಿತರ ನೋವು ಸಂಕಷ್ಟದ ಸ್ಥಿತಿಯನ್ನು ಹೇಳುವ ಮತ್ತು ಆಶಯಗಳ ಚಿತ್ರವನ್ನು ನಮ್ಮ ಮುಂದೆ ನೆಲೆಗೊಳಿಸುತ್ತಾರೆ. ಇವರು ಸಾಮಾಜಿಕ ಸಮಸ್ಯೆಗಳು ಮತ್ತು ಅದರ ಜೊತೆಗೆ ಪ್ರತಿಭೆಯ ಸ್ಥಿತಿಯನ್ನು ಅನಾವರಣಾ ಮಾಡಿ ಈ ಆತ್ಮಕತೆಗಳು ಸಮುದಾಯಕ್ಕೆ ತೋರಿಸುತ್ತವೆ. ಅಂದರೆ ಅಂದಿನ ಕಾಲದಲ್ಲಿ ಜ್ಞಾನ ದಲಿತ ವರ್ಗದವರಿಗೆ ಇರಲಿಲ್ಲ. ಕಾಲ ಕಳೆದಂತೆ ಬದಲಾಯಿತು. ಇದಕ್ಕೆ ತಾಳ ಹಾಕುವಂತೆ ಆ ಕಾಲದ ಪರಿಸರವೂ ಇಂಥದನ್ನು ಬಗೆಹರಿಸಿಕೊಂಡು ಬರೆಯುವ ಸವಾಲನ್ನು ತರಲಿಲ್ಲ. ಆದರೆ ದಲಿತ ಸಾಹಿತ್ಯ ವೈಯುಕ್ತಿಯಲ್ಲಿ ಸಮಷ್ಠಿಯ ನೆಲೆಯನ್ನು ತೋರಿಸಲು ಪ್ರಯತ್ನಿಸಿದರು.

ದಲಿತ ಸಾಹಿತ್ಯದಲ್ಲಿ ಆತ್ಮಕತೆಯ ಪ್ರಕಾರ ಬಂದ ನಂತರ ವೈಯಕ್ತಿಕತೆ, ಸಮುದಾಯದ ನೋವು, ಕಷ್ಟ, ಶೋಷಣೆ, ಜಾತೀಯತೆ, ನಂಬಿಕೆ, ಹೋರಾಟಗಳ ಬಗ್ಗೆ ಈ 'ಊರುಕೇರಿ' ಮತ್ತು 'ಮಣೆಗಾರ' ಆತ್ಮಕಥನಕಾರರು ಸೌಮ್ಯದ ನೆಲೆಯಲ್ಲಿ ಇಡೀ ಸಮೂಹವನ್ನು ಬಡಿದೆಬ್ಬಿಸಿದ್ದಾರೆ.

ಸಿದ್ಧಲಿಂಗಯ್ಯನವರ ಆತ್ಮಕತೆ ಸಾಮಾಜಿಕ ಸಮಸ್ಯೆಗಳು ಮತ್ತು ವ್ಯಕ್ತಿಯ ಅಂತರಂಗದ ಸಮಸ್ಯೆ ಇವೆರಡು ಅಲ್ಲದೆ ಸಮೂಹ ಪ್ರಜ್ಞೆಯನ್ನು ಪ್ರಮುಖವಾಗಿ ಅನಾವರಣ ಗೊಳಿಸಿದೆ. ಆದರೆ ಬಡತನ, ಹಸಿವು ಶೋಷಿತ ಸಮುದಾಯವನ್ನು

ಕೆರಳಿಸುವುದರಲ್ಲಿ ಯಶಸ್ಸನ್ನು ಪಡೆದಿದೆ. ಇವರು ಗಂಭೀರವಾದ ಆಶಯಗಳನ್ನು ತಮ್ಮ ಆತ್ಮಕತೆಯಲ್ಲಿ ಹೇಳುವ ಸಂದರ್ಭದಲ್ಲಿ ಮಡುಗಟ್ಟಿಸಿರುವುದನ್ನು ನಾವು ಗುರ್ತಿಸಬಹುದು. ಇಲ್ಲಿರುವ ಒಂದೊಂದು ಪ್ರಸಂಗಗಳು ಒಂದೊಂದು ಕಾದಂಬರಿಯಾಗುವ ವಿಸ್ತಾರದ ಆಳವನ್ನು ಹೊಂದಿವೆ. ಶೊಷಣೆಯ ವಿರುದ್ಧದ ಪ್ರತಿಕ್ರಿಯೆ ತನ್ನಣ್ಣ ರಾಜಕಾರಣದಿಂದ ದಲಿತರು ಮೇಲೆ ಬರಲು ಸಾಧ್ಯವೆಂಬುದನ್ನು ನಾವು ಈ ಆತ್ಮಕತೆಯಲ್ಲಿ ಗುರ್ತಿಸಬಹುದಾಗಿದೆ. ಇದು ದಲಿತನೊಬ್ಬನ ಆತ್ಮಕತೆಯಲ್ಲ ಇಡೀ ದಲಿತ ಜನಾಂಗದ ಶೋಷಿತ ಸಮೂಹದ ಆತ್ಮಕತೆಯಾಗಿಯೂ ನಿಲ್ಲುತ್ತದೆ.

ತುಂಬಾಡಿ ರಾಮಯ್ಯ ಅವರ ಆತ್ಮಕತೆಯು ಇಡೀ ದಲಿತ ಸಮೂಹದ ಗ್ರಾಮೀಣ ಪರಿಸರದಲ್ಲಿ ಇಂದಿಗೂ ದಲಿತರು ಯಾವ ರಿತಿ ಶೋಷಣೆಗೆ ಒಳಗಾಗಿದ್ದಾರೆ ಮತ್ತು ಅವರನ್ನು ಸಮಾಜ ನೋಡುವ ರೀತಿಯನ್ನು ತಿಳಿಯಬಹುದಾಗಿದೆ. ಸಾಹಿತ್ಯವನ್ನು ತಿಳಿದ ವ್ಯಕ್ತಿಯಾದ ರಾಮಯ್ಯ ಅವರು ಪರಿಚಿತರೇನಲ್ಲ ಅಂಥ ಸಂದಿಗ್ದ ಪರಿಸ್ಥಿತಿಯಲ್ಲಿ ಎಲ್ಲರಿಗಿಂತ ಭಿನ್ನವಾದ ರೀತಿಯಲ್ಲಿ ತನ್ನ ಆತ್ಮಕತೆಯನ್ನು ಹೇಳುವಲ್ಲಿ ವಿಶಿಷ್ಟವಾಗಿ ಕಾಣಿಸಿಕೊಂಡಿದ್ದಾರೆ.

ಆ ಕಾಲಕ್ಕೂ ಈ ಕಾಲಕ್ಕೂ ಕಡುವಾಸ್ತವಗಳೆನಿಸಿದ ವರ್ಗ ವೈರುಧ್ಯಗಳು ದಲಿತರ ಆತ್ಮಕತೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿಯೇ ವ್ಯಕ್ತವಾಗಿದೆ. ಮೇಲುನೋಟಕ್ಕೆ ಕಾಣಿಸುವ ವರ್ಗ, ವರ್ಣ, ಜಾತೀಯತೆ, ಅಸ್ಪೃಶ್ಯತೆ, ಶೋಷಣೆಯನ್ನು ಈ ಇಬ್ಬರು ಆತ್ಮಕಥನಕಾರರು ದಾಖಲಿಸಿದ್ದಾರೆ. ಈ ಅಸಮಾನತೆ ನಿರ್ನಾಮವಾಗಿ ಶೊಷಿತ ವರ್ಗ ಕಳೆದುಕೊಂಡ ಎಲ್ಲ ಸೌಲಭ್ಯ ತೃಪ್ತಿಗಳನ್ನು ಪಡೆಯುವ ತನಕ ಸಮಾಜದಲ್ಲಿ ಕ್ರಾಂತಿ ಹಸಿರಾಗಿರುತ್ತದೆ ಎಂಬ ಭಾವನೆ ದಲಿತ ಸಾಹಿತ್ಯದ ಲೇಖಕರದು.

ಭಾರತದಲ್ಲಿ ಜಾತಿವ್ಯವಸ್ಥೆ ತಾಂಡವವಾಡುತ್ತಿದೆ ಗಲ್ಲಿ ಗಲ್ಲಿಗಳಲ್ಲಿ ಬೀದಿ ಬೀದಿಗಳಲ್ಲಿ ಜಾತಿಯ ಆಚರಣೆಯನ್ನು ನಾವು ನೋಡುತ್ತಿದ್ದೇವೆ ಸ್ವಜಾತಿ ಪಕ್ಷಪಾತ ಸ್ವಜಾತಿ ರಾಜಕಾರಣ, ಹಿಗೆಲ್ಲಾ ಹಲವಾರು ಕ್ಷೇತ್ರಗಳಲ್ಲಿ ಇಂದಿಗೂ ಕೂಡ ಭಾರತದಲ್ಲಿ ನಾವು ನೊಡುತ್ತಿದ್ದೇವೆ. ಈ ಎಲ್ಲಾ ಆಚರಣೆಗಳನ್ನು ಯಾಕೆ ಆಚರಿಸುತ್ತಿದ್ದೇವೆ ಎಂಬುದಕ್ಕೆ ಉತ್ತರವೇ ಇಲ್ಲ. ಸೃಷ್ಟಿಕರ್ತನ ಶರೀರದಿಂದ ಜನರು ಜನಿಸಿದ್ದಾರೆ, ಪ್ರತಿಯೊಂದು ಅಂಗಾಂಗವೂ ವ್ಯಕ್ತಿಗೆ ಅತ್ಯಂತ ಮುಖ್ಯವಾದದ್ದು, ಹಾಗಾಗಿ ವ್ಯಕ್ತಿ

ಅಂಗಗಳ ಯಾವ ಭಾಗದಿಂದಲೇ ಜನಿಸಿದರೇ ಏನಂತೆ? ಮನುಷ್ಯ ಮನುಷ್ಯನೇ ಅಲ್ಲವೇ ಇದರಲ್ಲಿ ಶ್ರೇಷ್ಠ-ಕನಿಷ್ಟ ಎಂಬ ಜಗವಾದರೂ ಎಲ್ಲಿದೆ?

ಪ್ರತಿದಿನ ಮಲ-ಮೂತ್ರವನ್ನು ತೊಳೆಯುವ ಕೈಗಳನ್ನು ಯಾವ ಜಾತಿಗೆ ಸೇರಿಸಬೇಕು? ಸ್ನಾನ ಮಾಡಿಯಾದ ನಂತರ ಉಪಯೋಗಿಸಿ ಬಿಚ್ಚಿಟ್ಟ ನಿಕ್ಕರ್ ಅನ್ನು ತೊಳೆಯುವ ತಾಯಿಯನ್ನು ನಾವು ಯಾವ ಜಾತಿಗೆ ಸೇರಿಸಬೇಕು. ಮನುಷ್ಯ ಮನುಷ್ಯನನ್ನು ಪ್ರೀತಿಸುವ ಗೌರವಿಸುವ ಗುಣಗಳು ಎಂದು ಮಾನವನಿಗೆ ಬರುತ್ತವೆಯೋ ಅಂದು ಜಾತಿವಿನಾಶದ ಅಂಶಗಳನ್ನು ನಾವು ನೋಡಲಿಕ್ಕೆ ಸಾಧ್ಯವಿದೆ. 'ಮನುಷ್ಯ ಜಾತಿ ತಾನೊಂದೆವಲಂ" ಎನ್ನುವ ಪಂಪನ ಜನಪರ ಕಾಳಜಿಯನ್ನು ನಾವು ಅಲ್ಲಗಳೆಯಲು ಸಾಧ್ಯವೇ ಇಲ್ಲ. ಡಾ.ಬಿ.ಆರ್.ಅಂಬೇಡ್ಕರ್ ರಚಿಸಿದ ಭಾರತದ ಬೃಹತ್ ಸಂವಿದಾನ ಕೇವಲ "ಮಹರ್ ಜಾತಿಯದೆ? ಅಥವಾ ಮಹರ್ ಜಾತಿಯ ಜನರಿಗೆ ಸೀಮಿತವೇ? ಇಲ್ಲ. ಈ ಎಲ್ಲಾ ಅಂಶಗಳಿಂದ ಬೇಸತ್ತಿದ್ದಂತಹ ಅಂಬೇಡ್ಕರ್ ಅದಕ್ಕಾಗಿ "ನಾನು ಹಿಂದೂವಾಗಿಯೇ ಹುಟ್ಟಿದರೂ ಹಿಂದೂವಾಗಿಯೇ ಸಾಯುವುದಿಲ್ಲ." ಎಂದು ಸಾರಿದರು. ಗಾಂಧಿ ಕೂಡ ಭಾರತದ ಜಾತಿ ವ್ಯವಸ್ಥೆಯನ್ನು ನೋಡಿ ಇಂಥ ಭವ್ಯ ಭಾರತದಲ್ಲಿ ಹಿಂದೂಧರ್ಮ ಬದುಕಿರುವುದಕಿಂತ ಅದು ಸಾಯುವುದನ್ನು ನಾನು ನೋಡಲಿಚ್ಚಿಸುವೆ" ಎಂದು,

ಭಾರತದಲ್ಲಿ ಬೆಳೆದು ಹೆಮ್ಮರವಾಗಿರುವ ಸಂಕೀರ್ಣ ಜಾತಿ ವ್ಯವಸ್ಥೆ ಸರಳೀಕರಣ ಗೊಳ್ಳಬೇಕಿರುವುದನ್ನು ಭಾರತೀಯ ದಲಿತ ಜನತೆ ಉತ್ಸುಕರಾಗಿ ನಿರೀಕ್ಷಿಸುತ್ತಿದ್ದಾರೆ. ಮನುಷ್ಯ ಭ್ರಾತೃತ್ವ ತತ್ವವನ್ನು ಅಳವಡಿಸಿಕೊಳ್ಳುವಂತಹ ಗುಣಗಳನ್ನು ರೂಪಿಸಿಕೊಳ್ಳಬೇಕಾಗಿದೆ. ದೇವಸ್ಥಾನ ಪ್ರವೇಶ ನಿಷೇಧ ಮದುವೆಯಲ್ಲಿ ಕಡೆಯಲ್ಲಿ ಕುಳಿತು ಊಟ ಮಾಡುವಂತಹವುಗಳು, ದಲಿತರಿಗೆ ಕ್ಷೌರಿಕ ಅಂಗಡಿಗಳಲ್ಲಿ ಕೂದಲು ಕಟಿಂಗ್ ನಿಷೇದ, ಪಾತ್ರೆಗಳನ್ನು ಮುಟ್ಟಿಸಿಕೊಳ್ಳಬಾರದು ಮನೆಯ ಹೊಸಲನ್ನು ದಾಟಬಾರದು ಎನ್ನುವಂತಹ ಹೀನ ನಡವಳಿಕೆಗಳನ್ನು ಕಣ್ಮರೆಯಾಗಬೇಕಿದೆ.

ಆರೋಗ್ಯಕರ ಸಮಾಜದ ನಿರ್ಮಾಣವಾದಾಗ ಮಾತ್ರ ದೇಶದ ಅಭಿವೃದ್ಧಿಗೆ ಪೂರಕವಾಗುತ್ತದೆ. ಸ್ವಸ್ತ ಸಮಾಜದ ರಚನೆಯಾಗಬೇಕು. ಇವನಾರವ ಎಂದೆನ್ನದೆ ಇವ ನಮ್ಮವ, ಇವನಮ್ಮವ ಎಂಬಂತಹ ಮನೋಭಾವನೆಗಳು ಜನರಲ್ಲಿ ಮಾಡಬೇಕಾಗಿದೆ.

ಮೇಲಿನ ಎಲ್ಲಾ ಅಂಶಗಳು ಸಮಾಜದಲ್ಲಿ ನಡೆಯುತ್ತಿದ್ದಂತ ವಾಸ್ತವಿಕ ಅನುಭವಗಳೇ ಆಗಿದ್ದು ಅವು ಇಪ್ಪತ್ತು ಮತ್ತು ಇಪ್ಪತ್ತೊಂದನೇ ಶತಮಾನಗಳಲ್ಲಿ ಸ್ವಲ್ಪ ಚೇತರಿಕೆಯನ್ನು ಕಾಣುತ್ತವೆ ಕಂಡಿವೆ. ನಿಜವಾದ ಅರ್ಥದಲ್ಲಿ ಹೇಳುವುದಾದರೆ ಪ್ರತಿಯೊಂದು ಮನಸ್ಥಿತಿಗಳು, ಚಿಂತನೆಗಳು ಸ್ವಜಾತಿ ಪ್ರೇಮವನ್ನು ಬೆಳಸಿಕೊಂಡಿವೆ. ವಿಶ್ವವಿದ್ಯಾನಿಲಯದ ಮಟ್ಟದಲ್ಲಿಯೂ ಕೂಡ ತಮ್ಮ ಜಾತಿಯ ಹೆಸರನ್ನು ಹೇಳಿಕೊಂಡು ಸಭೆ-ಸಮಾರಂಭಗಳು ನಡೆಯುತ್ತಿವೆ ಅಂತಹವುಗಳು ನಿಲ್ಲಬೇಕು. ಸರ್ವರೊಳಗೊಂದಾಗಿ ಬದುಕಿದಾಗ ಮಾತ್ರ ನಮ್ಮಗಳ ಏಳ್ಗೆ ಸಾಧ್ಯವಾಗುತ್ತದೆ ಸ್ವಾಸ್ಥ್ಯ ಸಮಾಜದ ನಿರ್ಮಾಣವಾಗುತ್ತದೆ. ಒಳ್ಳೆಯ ವ್ಯಕ್ತಿಗಳನ್ನು, ಒಳ್ಳೆಯ ಪುಸ್ತಕವನ್ನು, ವಿಚಾರವಂತ ಚಿಂತನೆಗಳನ್ನು ಜಾತಿಯ ತಳದಲ್ಲಿ ಇಟ್ಟು ನೋಡಬಾರದು ಸತ್ಯ ಯಾವುದಾದಾರೇನು ಒಪ್ಪಿಕೊಳ್ಳಬೇಕು. ಸಿದ್ಧಲಿಂಗಯ್ಯ ಹಾಗೂ ತುಂಬಾಡಿ ರಾಮಯ್ಯ ಈ ಇಬ್ಬರು ಆತ್ಮಕಥನಕಾರರ ಒಳ ಅಂಶಗಳು, ನಿರೀಕ್ಷೆಗಳು ಒಂದೇ ಆದರೂ ಕೂಡ ಸಾಗಿದ ರೀತಿ ಬೇರೆ ಬೇರೆಯದಾಗಿದೆ. ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕತೆಯಲ್ಲಿಯು ಕೂಡ ಬಹಳ ಗಂಭೀರವಾದ ಚಿಂತನೆಗಳಿವೆ. ನಾಯಿಯ ಲಾಳಿ ಕತ್ತರಿಸಿದ ಪ್ರಸಂಗ ಮತ್ತು ಎಮ್ಮೆ ಹೋರಿಗೆ ಬಂದಿದ್ದು ಈ ಅನುಭವಗಳು ಎಂತಹವರನ್ನು ಚಿಂತನೆಗೆ ಈಡುಮಾಡುತ್ತದೆ. ಏಕೆ ಈ ಎರಡು ಪ್ರಸಂಗಗಳನ್ನು ನೆನಪಿಗೆ ತರುತ್ತಿದ್ದೇನೆಂದರೆ ಯೋಚಿಸಲು ಬಹಳಷ್ಟು ಅವಕಾಶಗಳಿವೆ ದಲಿತ ಅಥವಾ ಅಸ್ಪೃಶ್ಯ ಎಂಬ ಕಾರಣಕ್ಕೆ ಕೂದಲು ಕಟಿಂಗ್ ಕೂಡ ಮಾಡುತ್ತಿರಲಿಲ್ಲ. ಹಣ ಕೊಡುತ್ತೇನೆ ಕಟಿಂಗ್ ಮಾಡು ಎಂದು ಹೇಳಿದರೂ ಕೂಡ ಜಾತಿಯಲ್ಲಿ ಕೆಳಗಿನವರಿಗೆ ಮಾಡುವುದಿಲ್ಲ ಕೆಲವು ಬೀದಿಗಳಲ್ಲಿ ಬಾಡಿಗೆಗೆ ಮನೆಗಳನ್ನು ಕೊಡುವುದಿಲ್ಲ. ಇಂತಹ ನಡವಳಿಕೆಗಳು ತಗ್ಗಲಿ ಎಂಬುದನ್ನು ಈ ಸಂಪ್ರಬಂಧವು ನಿರೀಕ್ಷಿಸುತ್ತದೆ. ಶುಚಿತ್ವ ಮತ್ತು ಆರೋಗ್ಯವಂತ ವ್ಯಕ್ತಿತ್ವದ ಮಾನವರನ್ನು ಎಲ್ಲಿದ್ದರೂ ಕೂಡ ಗೌರವಿಸುವಂತಿರಬೇಕು. ಸಮಾಜದಲ್ಲಿ ಉನ್ನತ ಜಾತಿಯವರೆನಿಸಿ ಕೊಂಡವರು ಚಪ್ಪಲಿಯ ಅಂಗಡಿಗಳನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಿರುವುದನ್ನು ನೋಡಿದರೆ ಅದು ಕೆಟ್ಟದ್ದೆ ಅಥವಾ ಕೀಳು ಕಾಯಕವೇ? ಇಲ್ಲ ಆದ್ದರಿಂದ ಕಾಯಕ ಅದೊಂದು ಸಾಧನಾಮಾರ್ಗವೆಂದು ಗೌರವಿಸಬೇಕು.

ಭಾರತೀಯ ಸಮಾಜದಲ್ಲಿ ಈ ನೀಚವ್ಯವಸ್ಥೆ ತಗ್ಗಬೇಕಾದರೆ ಅಂತರ್ ಜಾತಿಯ ವಿವಾಹ ಮತ್ತು ಅಂತರ್‌ಜಾತಿಯ ಭೋಜನ ಕೂಟಗಳು ನಡೆಯಬೇಕು. ನಾವೆಲ್ಲರೂ

ಒಂದೆ ಎನ್ನುವಂತಹ ಜಾತ್ಯಾತೀತ ಮನೋಧರ್ಮಗಳು ಸಮಾಜದಲ್ಲಿ ಸೃಷ್ಟಿಯಾಗ-ಬೇಕು.

ಜಾತಿಯ ಹೆಸರಿನ ಕಳಂಕಿತ ಆಚರಣೆಗಳು ಅನ್ವಯಕರಿಂದಲೇ ಹೆಚ್ಚಾಗುತ್ತಿವೆ. ಅವುಗಳೆಲ್ಲವೂ ಕೂಡ ಕಡಿಮೆಯಾಗಬೇಕಿದೆ ಜಾತಿಯ ಹೆಸರು ಹೇಳಿ ಪರರಿಗೂ ತೊಂದರೆಗಳು ಉಂಟಾಗದಿರಲಿ, ಬದುಕಿ ಹಾಗೂ ಬದುಕಲು ಅವಕಾಶ ಮಾಡಿಕೊಡಿ, ಜಾತಿಯನ್ನು ಹೆಸರು ಹೇಳಿ ದುರುಪಯೋಗ ಮಾಡಬೇಡಿ ಎಂಬುದನ್ನು ನನ್ನ ಈ ಪ್ರಭಂದ ಬಯಸುತ್ತದೆ.

ಒಟ್ಟಾರೆಯಾಗಿ ಸಮಾಜದಲ್ಲಿ ನೊಂದ ಜನರಿಗೊಂದು ಮಾನಸಿಕ ನೆಮ್ಮದಿ, ಆರ್ಥಿಕ, ಸಾಮಾಜಿಕ ಸಮಾನತೆಗಳು ದೊರಕುವಂತಾಗಲಿ, ನ್ಯಾಯಯುತವಾದ ಅವಕಾಶಗಳು ಸದಪಯೋಗವಾಗಲಿ, ಜಾತಿಯ ಹೆಸರಿನ ನೀಚ ಆಚರಣೆಗಳು ದೂರವಾಗಿ ಶಾಂತಿಯುತ ದೇಶಾಭಿವೃದ್ಧಿಗೆ ನೆರವಾಗಲಿ ಎಂದು ಬಯಸುತ್ತದೆ.

# ಪರಾಮರ್ಶನ ಗ್ರಂಥಗಳು


೧. ಗೌರ್ಮೆಂಟ್ ಬ್ರಾಹ್ಮಣ ಅರವಿಂದ ಮಾಲಗತ್ತಿ

೨. ಬಡವರ ನಗುವಿನ ಶಕ್ತಿ ಸಂಪಾದನೆ, ಎಚ್.ದಂಡಪ್ಪ,,,,

೩. ನೋವು ಹೆತ್ತ ಪ್ರೀತಿ ಸಂಪಾದನೆ, ಅಪ್ಪಗೆರೆಸೋಮಶೇಖರ್, ನರೇಂದ್ರಕುಮಾರ್.

೪. ದಲಿತ ಮಾರ್ಗ ಸಂಪಾದನೆ– ಅರವಿಂದ ಮಾಲಗತ್ತಿ

೫. ಕಥೆಯಾಗುವ ಆತ್ಮಕತೆ ಲವಲವಿಕೆಯ ನವಗಾಥೆ, ಕನ್ನಡಪ್ರಭ ೧೩–೦೨–೨೦೦೦

೬. ಆತ್ಮಕತೆಗಳಲ್ಲಿ ಕರ್ನಾಟಕದ ಕತೆ ಬಿ.ಎಂ.ಪುಟ್ಟಯ್ಯ

೭. ದಲಿತನೊಬ್ಬನ ಆತ್ಮಕತೆ ಲಂಕೇಶ್‌ಪತ್ರಿಕೆ– ಮಾರ್ಚ, ೨೨ ೨೦೦೦

೮. ಊರುಕೇರಿ ಭಾಗ–೧,೨ ಡಾ. ಸಿದ್ದಲಿಂಗಯ್ಯ

೯. ಮಣೆಗಾರ ತುಂಬಾಡಿ ರಾಮಯ್ಯ

೧೦. ಕನ್ನಡ ದಲಿತ ಸಾಹಿತ್ಯ ಸಮಾಲೋಕನ, ಸಂ: ಅರ್ಜುನಗೊಳಸಂಗಿ, (ಕರ್ನಾಟಕ ಸಾಹಿತ್ಯ ಅಕಾಡೆಮಿ)

೧೧. ಮನವಿಲ್ಲದವರ ಮಧ್ಯೆ ಕೆ.ಗೋವಿಂದರಾಜು


*****

